# ಕರ್ನಾಟಕದ ವ್ಯಂಗ್ಯ ಚಿತ್ರಕಲೆ

(ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)







ಸಂಶೋಧಕರು
**ಜಿ.ವಿ. ಶಶಿಕಲಾ**

ಮಾರ್ಗದರ್ಶಕರು
**ಡಾ.ಎಸ್.ಸಿ.ಪಾಟೀಲ**
ಪ್ರಾಧ್ಯಾಪಕರು, ಮುಖ್ಯಸ್ಥರು
ದೃಶ್ಯಕಲಾ ವಿಭಾಗ







ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೨

# ಕರ್ನಾಟಕದ ವ್ಯಂಗ್ಯ ಚಿತ್ರಕಲೆ

(ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)

ಸಂಶೋಧಕರು
ಜಿ.ವಿ. ಶಶಿಕಲಾ

ಮಾರ್ಗದರ್ಶಕರು
ಡಾ. ಎಸ್.ಸಿ. ಪಾಟೀಲ
ಪ್ರಾಧ್ಯಾಪಕರು, ಮುಖ್ಯಸ್ಥರು
ದೃಶ್ಯಕಲಾ ವಿಭಾಗ



ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೨

## ಮಾರ್ಗದರ್ಶಕರ ದೃಢೀಕರಣ ಪತ್ರ

"ಕರ್ನಾಟಕದ ವ್ಯಂಗ್ಯಚಿತ್ರಕಲೆ" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಜಿ.ವಿ. ಶಶಿಕಲಾ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ ಪ್ರಸ್ತುತ ಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಯಾವುದೇ ಉದ್ದೇಶಕ್ಕಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 25/8/2012

(ಡಾ.ಎಸ್.ಸಿ. ಪಾಟೀಲ)
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಕರ್ನಾಟಕದ ವ್ಯಂಗ್ಯಚಿತ್ರಕಲೆ

## ಪರಿವಿಡಿ

## ಪ್ರಸ್ತಾವನೆ

ಕರ್ನಾಟಕದಲ್ಲಿರುವ ವಾಸ್ತು ಶಿಲ್ಪ ಮತ್ತು ಚಿತ್ರಕಲೆ ಹಾಗೂ ಪರಂಪರಾಗತವಾಗಿ ಬಂದುಳಿದ ಜಾನಪದ ಕಲೆ ಕಲಾವೈಭವದ ಒಂದು ಪ್ರಧಾನ ಭಾಗವಾಗಿದೆ. ಕರ್ನಾಟಕದಲ್ಲಿ ಪ್ರಾಮುಖ್ಯವಾಗಿ ಕಂಡುಬರುವ ಕಲಾಕೃತಿಗಳು ಕ್ರಿ.ಶ. ಸುಮಾರು ಎರಡನೇ ಶತಮಾನದಿಂದ ಕ್ರಿ.ಶ. ಏಳನೇ ಶತಮಾನದವರೆಗಿನ ದೀರ್ಘಾವದಿಯಲ್ಲಿ ರಚಿಸಲ್ಪಟ್ಟ ಅಜಂತದ ಭಿತ್ತಿಚಿತ್ರಗಳಂತೂ ಕಲಾವಿದ, ಕಲಾವಿಮರ್ಶಕ ಹಾಗೂ ರಸಿಕ ಜನರನ್ನು ಮುಗ್ದಗೊಳಿಸಿದೆ. ಈ ಭಿತ್ತಿಚಿತ್ರಗಳನ್ನು ರಚಿಸಿದ ಕಲಾವಿದರಲ್ಲಿ ಕನ್ನಡಿಗರು ಇದ್ದಿರಬೇಕೆಂಬುದು ತಜ್ಞರ ಅಭಿಪ್ರಾಯ.

ಆರನೇ ಶತಮಾನದಲ್ಲಿ ಚಾಲುಕ್ಯರ ಆಡಳಿತದಲ್ಲಿ ಕಲೆಗೆ ಪ್ರೋತ್ಸಾಹ ದೊರಕಿತು. ಆ ಕಲಾವಿದರು ವಾಸ್ತುಶಿಲ್ಪ ಭಿತ್ತಿಚಿತ್ರಗಳನ್ನು ಸ್ವತಂತ್ರ ಶೈಲಿಯಿಂದ ನಿರ್ಮಿಸಿದರು. ಚಾಲುಕ್ಯರು ಸೃಜನಾತ್ಮಕ ಕಲಾಕೃತಿಗಳನ್ನು ಇಂದಿಗೂ ಬಾದಾಮಿ, ಪಟ್ಟದಕಲ್ಲು ಮತ್ತು ಐಹೊಳೆಯಲ್ಲಿ ಕಾಣಬಹುದು. ಈ ಕನ್ನಡ ಕಲಾವಿದರ ಕೊಡುಗೆ ಭಾರತೀಯ ಕಲೆಗೆ ಅಪಾರ. ಅನಂತರ ಹತ್ತನೆಯ ಶತಮಾನದಲ್ಲಿ ದೊರೆ ಚಾವುಂಡರಾಯನ ಪ್ರೋತ್ಸಾಹದಿಂದ ಶ್ರವಣಬೆಳಗೊಳದಲ್ಲಿರುವ ಬಾಹುಬಲಿಯ ಪ್ರತಿಮೆ ಭಾರತ ಕಲಾಸಂಪತ್ತಿಗೆ ಕರ್ನಾಟಕದ ಒಂದು ಮಹತ್ವಪೂರ್ಣ ಕೊಡುಗೆಯನ್ನು ಕೊಟ್ಟಿದೆ.[೧]

ಸುಮಾರು ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ, ತಾಡವಾಲೆ ಚಿತ್ರಗಳನ್ನು ದಕ್ಷಿಣ ಕನ್ನಡ ಮೂಡಬಿದರೆಯ ಜೈನ ಸಂಗ್ರಹಾಲಯದಲ್ಲಿ ಕಾಣಬಹುದು. ಈ ಕಲಾವಿದರು ಸೃಜನಾತ್ಮಕವಾಗಿ ರಚಿಸಿದ್ದ ಕೃತಿಗಳು ಮುಂದಿನ ಭಾರತೀಯ ಚಿಕಣಿ ಚಿತ್ರಗಳಿಗೆ ಮೂಲಾಧಾರವೆನ್ನಬಹುದು. ಇದೇ ಶೈಲಿಯಲ್ಲಿ ಬರೆದ ಭಿತ್ತಿಚಿತ್ರಗಳನ್ನು ಶ್ರವಣಬೆಳಗೊಳದಲ್ಲಿ ಇಂದಿಗೂ ಕಾಣಬಹುದು. ಹನ್ನೆರಡು, ಹದಿಮೂರನೇ ಶತಮಾನದಲ್ಲಿ ಹೊಯ್ಸಳರ ಆಶ್ರಮದಲ್ಲಿ ರಚಿಸಲ್ಪಟ್ಟ ಬೇಲೂರು, ಹಳೆಬೀಡಿನ ವಾಸ್ತುಶಿಲ್ಪ ಕೃತಿಗಳು ತಮ್ಮ ಹಿಂದಿನ ಭವ್ಯತೆಯನ್ನು ಕಳೆದುಕೊಂಡರೂ, ಅಲಂಕರಣ ಹಾಗೂ ಅತಿ ಸೂಕ್ಷ್ಮ ಕೆಲಸಕ್ಕಾಗಿ ಪ್ರಖ್ಯಾತಿಗೊಂಡಿವೆ.

ಕರ್ನಾಟಕದ ಜಾನಪದ ಕಲೆಗಳ ಕೊಡುಗೆಯೂ ಅಪಾರವಾದದ್ದು. ಇಂದಿಗೂ ಅಳಿದುಳಿದಿರುವ ತೊಗಲು ಗೊಂಬೆಗಳ ಸೃಜನಶೀಲತೆ, ವರ್ಣವೈಖರಿ ಆಧುನಿಕ ಕಲಾವಿದನು ಬೆರಗುಗೊಳಿಸುವಂತಹದು, ಹಾಗೆಯೇ

---

ಅಡಿಟಿಪ್ಪಣಿಗಳು

೦೧. ಎನ್. ಮರಿಶಾಮಾಚಾರ್ : ಕಲಾ ಸಾಧಕ ; ಪುಟ ಸಂಖ್ಯೆ-೨೬

ನಾಗರಿಕತೆಯಿಂದ ದೂರವಿದ್ದ ಕರ್ನಾಟಕದ ಆದಿವಾಸಿ ಜನರು ರಚಿಸಿದ ಮೂರ್ತಿಗಳು ಮುಖವಾಡಗಳು ಇವುಗಳಲ್ಲಿ ಆ ಜನರ ಮುಗ್ಧಭಾವ, ನೇರ ಚಿತ್ರಣದ ವೈಖರಿ ಹಾಗೂ ಭಾವ ಪ್ರಾಧಾನ್ಯ ಎದ್ದು ಕಾಣುತ್ತದೆ.[೨] ಈ ಮುಗ್ಧ ಕಲಾವಿದರ ಕೃತಿಗಳು ಒರಟು, ಭೀಕರ ಎಂದು ಅನಿಸಬಹುದು ಆದರೆ ಇವುಗಳಲ್ಲಿಯ ಸೃಜನಶೀಲತೆಯ ಆಧುನಿಕ ಕಲಾವಿದನಿಗೆ ಪ್ರೇರಣೆಯನ್ನು ಕಾಣುವಂತಿವೆ.

ಮನೆಯ ಮುಂಭಾಗದಲ್ಲಿ ಮಹಿಳೆಯರು ರಂಗವಲ್ಲಿಯನ್ನು ಚಿತ್ರಿಸುವುದು ಬಹು ಪುರಾತನ ಪದ್ಧತಿ. ಇವುಗಳ ರೇಖಾ ವಿನ್ಯಾಸ ಸಾಂಕೇತಿಕ ಮೌಲ್ಯ ಮತ್ತು ಸೃಜನಶೀಲತೆ ಜನಸಾಮಾನ್ಯರಿಂದ ಸಾಕಷ್ಟು ಮನ್ನಣೆಯನ್ನು ಪಡೆದಿದ್ದರೂ ಕಲಾವಿದರನ್ನು ಬೆರಗುಗೊಳಿಸುತ್ತವೆ.

ಜಗತ್ತಿನಲ್ಲಿ ಕುಶಲ ರಸವೃತ್ತಿಗಳೆಷ್ಟು ಎಂದರೆ ಸಾವಿರಾರು ಅಥವಾ ಲಕ್ಷಾಂತರ ಕಲೆಗಾರರಿರಬಹುದು. ಅಥವಾ ನಮ್ಮಲ್ಲಿ ತಿಳಿಯದಿರುವ ಕಲೆಗಳು ಹಲವಾರು ಇರಬಹುದು. ಇಂಗ್ಲೀಷ್ ಭಾಷೆಯಲ್ಲಿ ಒಂದು ಮಾತು ಇದೆ. "ಆರ್ಟ್ ಇಸ್ ಲಾಂಗ್, ಲೈಫ್ ಇಸ್ ಶಾರ್ಟ್", ಅರ್ಥಾತ್ ಜೀವನಕ್ಕಿಂತ ವಿಸ್ತಾರವಾದದ್ದು ಕಲೆ ಎಂದು ಕಲಿತಷ್ಟು, ಕಲೆಯಿದ್ದು ಅದು ಮುಗಿಯದಷ್ಟು ಬೆಳೆಯುತ್ತಿರುವುದರಿಂದ ಎಷ್ಟು ಕಲೆಗಳನ್ನು ಕಲಿತರು ಸಾಲದು ವಾತ್ಸಾಯನನು (೧ನೇ ಶತಮಾನದಲ್ಲಿದ್ದವನು) ತನ್ನ ಗ್ರಂಥ 'ಗೀತಪರಿತಂ' ಎಂಬುದರಲ್ಲಿ ಶಾಸ್ತ್ರೀಯ ಕಲೆಗಳು ಬೆಳೆದಿರುವುದು. ಕ್ರಿಸ್ತಪೂರ್ವದವರಲ್ಲಿ ಪ್ಲೇಟೋ, ಅರಿಸ್ಟಾಟಲ್‌ರಂತಹ ಕಲಾತತ್ತ್ವ ಚಿಂತಕರಿದ್ದಂತೆ ನಮ್ಮಲ್ಲಿ ನಾಟ್ಯ ಶಾಸ್ತ್ರಕಾರ ಭರತನೆಂಬವನೊಬ್ಬನಿದ್ದ ವಿಶ್ವಕರ್ಮನ ಸ್ಥಪತಿ ಕಲೆಯೆಂಬ ವಾಸ್ತುಶಾಸ್ತ್ರವೂ ಒಂದಿತ್ತು ಗಾಂಧರ್ವ ಸಂಗೀತ ಮತ್ತು ಋಷಿ ಕಾವ್ಯಗಳು ಹಿರಿಯ ಶಾಸ್ತ್ರಗಳಾಗಿ ಬೆಳೆದಿದ್ದವು. ಕ್ರಿಸ್ತನ ಕಾಲದ ಅನಂತರ ಬಾಸ ಕಾಳಿದಾಸ ಇತ್ಯಾದಿ ನಾಟಕಕಾರರಿಂದ ನಾಟಕ ಕಲೆಯೂ ಬೆಳೆಯಿತು. ಗುಪ್ತರ ಕಾಲದಲ್ಲಿ ಮಂದಿರಗಳು ಬೆಳೆದಂತೆ ಮೂರ್ತಿ ಶಿಲ್ಪವೂ ಬೆಳೆಯಿತು. ಎಂಟು ಸಾವಿರ ವರ್ಷ ಹಳೆಯದಾಗಿದ್ದರೂ ಅಪರೂಪವಾಗಿದ್ದ ಚಿತ್ರಕಲೆಯೂ ಮತ್ತೆ ಶಾಸ್ತ್ರೀಯವಾಗಿ ಬೆಳೆಯಿತು ಎನ್ನಬಹುದು. ಆದರೆ ಇವಿಷ್ಟು ಲಲಿತಕಲೆಗಳಾದರೆ ಉಪಯುಕ್ತವಾದ ಇನ್ನು ಅನೇಕ ಕಲೆಗಳು ಕೇವಲ ಜನಾನಂದಕ್ಕಲ್ಲದೆ ಜನರ ಅಗತ್ಯದ ಪೂರೈಕೆಯನ್ನು ಮಾಡಿದವು. ಉದಾಹರಣೆಗಾಗಿ ಬಡಗಿ ಕಲೆ, ನೇಕಾರ ಕಲೆ, ಲೋಹದ ಕೈ ಕೆಲಸ, ಕುಂಬಾರಿಕೆ, ಆಟದ ವಸ್ತುಗಳ ತಯಾರಿಕೆ, ಶೃಂಗಾರ ವಸ್ತುಗಳ ತಯಾರಿಕೆ, ಪಾಕಶಾಸ್ತ್ರ, ತೋಟಗಾರಿಕೆ, ಮದನ ಕಲೆ (ಶೃಂಗಾರ ಕಲೆ), ಪರಿಮಳ ವಸ್ತುಗಳ ಹಾಗೂ ಮಾಲಿನೀ ಕಲೆ, ಇಂದ್ರಜಾಲ ಇತ್ಯಾದಿ.[೩]

ಲಲಿತ ಕಲೆಗಳು ಮಾನವನ ಬೌದ್ಧಿಕ ವಿಕಾಸವನ್ನು ಪ್ರತಿನಿಧಿಸುತ್ತ ಇಂದ್ರಿಯಗಳಿಗೆ ರಸಾನಂದ ಕೊಡುವವಲ್ಲದೆ, ಹೃದಯಕ್ಕೆ ಸುಖಾನುಭವವನ್ನೂ ಕೊಡುವಂತಹವು. ಅವುಗಳಲ್ಲಿ ಕೆಲವನ್ನು 'ದೃಶ್ಯ' (Visval Art) ಕಲೆಗಳೆಂದೂ ಇನ್ನೂ ಕೆಲವನ್ನು ಶ್ರಾವ್ಯ ಕಲೆಗಳೆಂದೂ ಮತ್ತೆ ಅಂತರ್ಭೇದ ಮಾಡಬಹುದು. ದೃಶ್ಯಮಾರ್ಗದಲ್ಲಿ ಚಿತ್ರಕಲೆ, ವಾಸ್ತುಕಲೆ, ಮೂರ್ತಿ ಶಿಲ್ಪಗಳೂ ಶ್ರಾವ್ಯದಲ್ಲಿ ಸಂಗೀತ ಮತ್ತು ಗಮಕ ಕಲೆಗಳೂ

---

೦೨. ಮರಿಶಾಮಾಚಾರ್ : ಕಲಾ ಸಾಧಕ ; ಪುಟ ಸಂಖ್ಯೆ-೨೭

೦೩. ವಾಸುದೇವ ಕಾಣೆಮಾರ್ : ಕಲಾ ಪ್ರಕಾರಗಳು ; ಪುಟ ಸಂಖ್ಯೆ-೧

ಬರುತ್ತವೆ. ಪ್ರದರ್ಶನ ಕಲಾ ವಿಭಾಗದಲ್ಲಿ (Preforming Art) ನೃತ್ಯ, ನಾಟಕ, ಸಂಗೀತ ಮತ್ತು ಹಸ್ತಕಲೆ ಇರುತ್ತವೆ.[೪]

ವೃತ್ತಿ ಕಲೆಗಳು ಮಾನವನ ಭೌತಿಕ ಭೋಗ ಜೀವನದ ಮಟ್ಟವನ್ನು ಪ್ರತಿನಿಧಿಸುತ್ತವೆ. ಇವುಗಳಲ್ಲಿ ಉಪಯುಕ್ತತೆಗಿಂತ ಕಲಾಕಾರನ ಕೌಶಲ್ಯದ ಆವಿಷ್ಕಾರ ಹೆಚ್ಚಿದಷ್ಟು ಪ್ರಮಾಣದಲ್ಲಿ ಅವುಗಳಲ್ಲಿ ಕಲಾ ಪ್ರಾಶಸ್ತ್ಯವು ಉಂಟಾಗುತ್ತದೆ. ಮನುಷ್ಯರಿಗೆಲ್ಲ ಒಳ್ಳೆಯ ಆಹಾರ, ವಸತಿ ಮಾನ ಸಾಧನಗಳ ಅಗತ್ಯವುಂಟು. ಇವುಗಳನ್ನು ಪೂರೈಸಲು ಉಪಯೋಗಿ ಸಾಮನುಗಳಲ್ಲಿ ಪರಿಷ್ಕರಣೆ ಆಗುತ್ತಲೂ ಉಪಯೋಗಿತ ವಿಧಾನದಲ್ಲಿ ಕೌಶಲ್ಯ ಹೆಚ್ಚುತ್ತಲೂ ಹೋಗುವಾಗ ಉಪಯುಕ್ತ ಕಲೆಗಳು ವಿಕಸಿತವಾಗುತ್ತವೆ. ಇನ್ನು ಬರೇ ಕೌಶಲ್ಯವಷ್ಟೇ ಸಿದ್ಧಿಯ ಗುರಿಯಾಗಿದ್ದು, ಹೃದಯಭಾಗಕ್ಕೆ ಎಡೆಯಿರದವುಗಳನ್ನು ಉಪಯುಕ್ತ ಕಲೆಗಳೆನ್ನಲಾಗುವುದಿಲ್ಲ. ಉದಾಹರಣೆಗೆ ಕಾಮಕಲೆ, ಬೇಟೆ, ದ್ಯೂತ, ಚೋರವಿದ್ಯೆ, ಯುದ್ಧವಿದ್ಯೆ ಇವೆಲ್ಲ ಕೌಶಲ್ಯಗಳನ್ನು ಸೂಚಿಸುತ್ತವೆ.[೫]

ಜೀವನದ ಭಾವ ಕೋಶವನ್ನು ಆಳವಾಗಿ ತೆರೆದು ಆನಂದ ಜಲವನ್ನು ಬಾವಿಯಿಂದ ಮೊಗೆದು ಹಾಕುವವೆ ಕಲೆಗಳು. ಎಲ್ಲಾ ಕಲೆಗಳು ಮೂಲತಃ ಆ ಒಂದೇ ಗುರಿಯುಳ್ಳವು. ಆದರೆ ಅವುಗಳು ಅನುಸರಿಸುವ ತಂತ್ರಗಳು ಮಾತ್ರ ಬೇರೆ ಬೇರೆಯಾಗಿವೆ. ಅಂತಹುದರಲ್ಲಿ ವ್ಯಂಗ್ಯ ಚಿತ್ರಕಲೆಯು ಒಂದಾಗಿದೆ. ಇದರಲ್ಲಿ ಅನೇಕ ಹಿರಿಯ ಹಾಗೂ ಕಿರಿಯ ತಲೆಮಾರಿನ ಕಲಾವಿದರು ಪ್ರಸ್ತುತ ದಿನಗಳಲ್ಲಿ ಅನೇಕ ಪತ್ರಿಕೆಗಳಲ್ಲಿ ಹಾಗೂ ಮಾಸಪತ್ರಿಕೆಗಳಲ್ಲಿ ಕಾಣಸಿಗುತ್ತಾರೆ. ಇಂತಹ ಅನೇಕ ಕಲಾವಿದರು. ವ್ಯಂಗ್ಯ ಚಿತ್ರಕಲಾ ಪ್ರಪಂಚಕ್ಕೆ ನೀಡಿದಂತಹ ಕೊಡುಗೆಯನ್ನು ಕುರಿತು ಅಧ್ಯಯನ ನಡೆಯಬೇಕಾಗಿರುವುದು ಮುಖ್ಯ ಅಂಶವಾಗಿದೆ.

## ಅಧ್ಯಯನದ ಉದ್ದೇಶ

ಕಲೆ ಎನ್ನುವುದು ಒಂದು ರೀತಿಯ ಪ್ರಾರ್ಥನೆ ಇದ್ದಂತೆ ಯೋಗದಂತೆ ಕಲಾವಿದನಾದವನು ಸೃಜನಶೀಲನಾಗಿ ತಾನೇ ತಾನಾಗಿ ತನ್ನೊಳಗೆ ಅರಿಯಬೇಕಾಗುತ್ತದೆ, ಇಳಿಯಬೇಕಾಗುತ್ತದೆ. ಮೊದಲು ತನ್ನೊಳಗೇ ಅರಿಯುವುದು ಮುಖ್ಯ ಹಾಗೂ ಅವಶ್ಯಕ ನಂತರ ಉಳಿದೆಲ್ಲವೂ ತಾನಾಗಿಯೇ ತೋರುತ್ತದೆ. ಎಲ್ಲ ವೈರುಧ್ಯ ಧ್ರುವಗಳು ಬಂದು ಒಂದೆಡೆ ಸೇರುವ ಕ್ರಿಯೆ ಕಲೆಯಲ್ಲಿ ನಡೆಯುತ್ತದೆ. ಕಲೆಯಲ್ಲಿ ಕಲೆ ಹಾಗೂ ಕಲಾವಿದ ಬೇರೆ ಬೇರೆ ಅಲ್ಲ ಎನ್ನುವಂಥ ಸಂದರ್ಭ ಒದಗುತ್ತದೆ. ಮರಣ, ಜೀವನ ಎನ್ನುವುದು ಎರಡೂ ಬೇರೆ ಬೇರೆ ಅಲ್ಲ ಬೆಳಕು ಮತ್ತು ಕತ್ತಲೆ ಎನ್ನುವುದು ಎರಡು ಬೇರೆ ಬೇರೆ ವಸ್ತುಗಳು ಅಲ್ಲಿ ಪ್ರಾರಂಭ ಹಾಗೂ ಕೊನೆ ಎನ್ನುವಂಥದ್ದಿಲ್ಲ. ಕಲೆ ಸಮಗ್ರತೆಯಲ್ಲಿ ಹುಟ್ಟುವಂಥದ್ದು ಕಲಾವಿದ ಸಂಪೂರ್ಣವಾಗಿ ತನ್ನನ್ನು ತನ್ನ ಕಲೆಯಲ್ಲಿ ಕಳೆದುಕೊಳ್ಳಲು ಸಾಧ್ಯವಾದಾಗ ಮಾತ್ರ ಕಲಾವಿದ ತನ್ನ ಕಲೆಯ ಮೂಲಕವೇ ತನ್ನನ್ನು ತಾನು ಪ್ರದರ್ಶಿಸಿಕೊಳ್ಳಲು ಸಾಧ್ಯವಾಗುವುದು.

ಒಬ್ಬ ಸುಂದರ ಸ್ತ್ರೀಯ ಶರೀರವನ್ನು ಸುಂದರವಾದ ಕಣ್ಣುಗಳಿಂದ ನೋಡುವ ಕಲಾವಿದ ಶರೀರದಲ್ಲೇ ಉಳಿದುಬಿಡುತ್ತಾನೆ. ಆದರೆ ಅದೇ ಸ್ತ್ರೀಯ ಸುಂದರ ಶರೀರವನ್ನು ಪ್ರೀತಿಯಿಂದ ಒಳ ಕಣ್ಣಿನಿಂದ ನೋಡಿದಾಗ

---

೦೪. ವಾಸುದೇವ ಕಾಣೆಮಾರ್ : ಕಲಾ ಪ್ರಕಾರಗಳು ; ಪುಟ ಸಂಖ್ಯೆ-೧

೦೫. ವಾಸುದೇವ ಕಾಣೆಮಾರ್ : ಕಲಾ ಪ್ರಕಾರಗಳು ; ಪುಟ ಸಂಖ್ಯೆ-೨

ಅದು ಕೇವಲ ಸುಂದರ ವಸ್ತುವಾಗಿ ಕಾಣದೆ ವಸ್ತುವಿಗಿಂತ ಮಿಗಿಲಾದ ಇನ್ನೇನೋ ಅದರಲ್ಲಿ ಅನುಭವಿಸಲು ಸಾಧ್ಯವಾಗುತ್ತದೆ. ನಮ್ಮ ದೃಷ್ಟಿಯ ಗುಣ ಧರ್ಮಕ್ಕೆ ಹಾಗೂ ಯೋಗ್ಯತೆಗೆ ತಕ್ಕಂತೆ ವಸ್ತುವಿಗಿಂತ ಹೆಚ್ಚಿನದನ್ನು ಮೇಲ್ಪಟ್ಟದ್ದನ್ನು ಶ್ರೇಷ್ಠವಾದುದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಹಾಗಾಗಿ ಚಿತ್ರರಚನೆ ಕೇವಲ ಕಣ್ಣಿನ ಸಹಕಾರ ಸಾಲದು. ಅದರ ಹಿಂದಿನ ಮನಸ್ಸು ಮುಖ್ಯವಾಗುತ್ತದೆ.[೬]

ನಾವು ನಾವೇ ಆಗಿದ್ದು ನಮ್ಮ ದೃಷ್ಟಿಯಂತೆ ನಮ್ಮ ಆಕೃತಿಗಳು ಚಿತ್ರದಲ್ಲಿ ರೂಪ ಪಡೆಯುತ್ತವೆ. ಆಗ ಮಾತ್ರ ಚಿತ್ರ ನಮ್ಮದೇ ಆಗಿರುತ್ತದೆ. ನಮ್ಮ ಮನಸ್ಸಿನ ವಸ್ತುವನ್ನೇ ಪ್ರತಿನಿಧಿಸುತ್ತದೆ. ನಕಲು ಮಾಡುವುದಾಗಲಿ, ಬೇರೆಯವರನ್ನು ಅನುಸರಿಸುವುದು ಅವಶ್ಯಕತೆಯಾಗಲಿ ಇಲ್ಲ. ಸ್ವಂತಿಕೆಯನ್ನು ಬಿಟ್ಟುಕೊಡುವ ಅವಶ್ಯಕತೆ ಇಲ್ಲಿ ನೈತಿಕತೆಯ ಬಗ್ಗೆಯಾಗಲಿ ಆದರ್ಶದ ಬಗ್ಗೆಯಾಗಲಿ ಯೋಚಿಸುವ ಅವಶ್ಯಕತೆ ಇಲ್ಲ. ಆದ್ದರಿಂದ ಆಚೆ ಹೋಗುವುದೇ ಮೇಲು ಸೃಜನ ಶೀಲತೆಯನ್ನು ಚಲನೆಯಲ್ಲಿ ಕಂಡುಕೊಳ್ಳಬಹುದು. ಸ್ಥಿರತೆ ಸೃಜನಶೀಲತೆಯನ್ನು ಲಕ್ಷಣದಲ್ಲಿ ಹೊಸದರಲ್ಲಿ ಹಾಗೂ ಅರಿಯದ್ದರಲ್ಲಿ ಇಣುಕುವ ಸಾಹಸವನ್ನು ಧೈರ್ಯವನ್ನು ಬೆಳೆಸಿಕೊಳ್ಳುವುದು ಒಳ್ಳೆಯ ಹೆದರಿಕೆ ನಮ್ಮನ್ನು ಯಾವಾಲೂ ಪರಿಚಿತದಲ್ಲೇ ಇರುವಂತೆ ಮಾಡುತ್ತದೆ. ಹಾಗಾಗಿ ನಾವು ಪಡೆದುಕೊಳ್ಳುವುದಕ್ಕಿಂತ ಕಳೆದುಕೊಳ್ಳುವುದೇ ಹೆಚ್ಚು.

ಜೀವಶಕ್ತಿ ಎನ್ನುವಂಥದ್ದು ಯಾವಾಗಲೂ ಹರಿಯುವಂಥದ್ದು, ಪ್ರವಹಿಸುವಂಥದ್ದು, ಹಾಗಾಗಿ ಅಸ್ತಿತ್ವದ ಹೊಸ ಹೊಸ ಆಯಾಮಗಳನ್ನು ಹೊಸ ಹೊಸ ಕ್ಷೇತ್ರಗಳನ್ನು ಕಂಡುಕೊಳ್ಳುವತ್ತ ನಮ್ಮ ಎಲ್ಲ ಚಲನೆಗಳೂ ಕಾಣಿಸಿಕೊಳ್ಳುತ್ತವೆ. ನದಿಯಾಗಿ ಹರಿಯುವುದು, ಅಂದರೆ ಯಾವಾಗಲೂ ಸಂಚಲನದಲ್ಲಿ ಇರುವುದೇ ಸೃಷ್ಟಿಯ ನಿಯಮ. ಚಿತ್ರಕಲೆ ಎನ್ನುವುದು ಒಂದು ಬಗೆಯ ವಿಕಾಸ ಯಾವಾಗಲೂ ಹೊಸ ಹೊಸ ಆಕಾರಗಳನ್ನು ಕಂಡುಕೊಳ್ಳುವ ಹವಣಿಕೆಯಲ್ಲೇ ಮುಂದುವರಿಯುವಂಥದ್ದು, ಅದಕ್ಕಾಗಿ ಚಿತ್ರಕಲಾವಿದನಾದವನು ಯಾವಾಗಲೂ ಚುರುಕಾಗಿಯೂ, ಜಾಗರೂಕನಾಗಿಯೂ, ಅರಿಯುವ ಆಕಾಂಕ್ಷೆ ಉಳ್ಳವನೂ, ಪ್ರತಿಭೆ ಉಳ್ಳ ಪ್ರಜ್ಞಾವಂತನೂ ಆಗಿರಬೇಕಾಗುತ್ತದೆ.[೭]

ಒಂದು ವಿಚಾರ ಸರಣಿಯಲ್ಲಿ ಒಂದು ಶಬ್ದ ಇನ್ನೊಂದು ಶಬ್ದಕ್ಕೆ ಸಹಾಯಕ ಹಾಗೂ ಸಹಕಾರಿ ಶಬ್ದವನ್ನು ಹುಟ್ಟು ಹಾಕುವುದನ್ನು ನಾವು ಗಮನಿಸುತ್ತೇವೆ. ಚಿತ್ರರಚನೆ ಕೂಡ ಅದೇ ರೀತಿಯಲ್ಲಿ ನಡೆಯುವ ಕ್ರಿಯೆಯಾಗಿದೆ. ಒಂದು ಆಕೃತಿಗೆ ಅನುಗುಣವಾದ ಇನ್ನೊಂದು ಆಕೃತಿಯಾಗಲಿ, ಒಂದು ಬಣ್ಣಕ್ಕೆ ಪೂರಕವಾದ ಇನ್ನೊಂದು ಬಣ್ಣವಾಗಲಿ ಚಿತ್ರದಲ್ಲಿ ಸೇರಿಕೊಳ್ಳುವ ಸರಣಿ ಕ್ರಿಯಾತ್ಮಕವಾದ ಇನ್ನೊಂದು ಬಣ್ಣವಾಗಲಿ ಚಿತ್ರದಲ್ಲಿ ಸೇರಿಕೊಳ್ಳುವ ಸರಣಿ ಕ್ರಿಯಾತ್ಮಕವಾದ ಮನಸ್ಸಿನ ಸುಂದರ ಸೃಜನಾತ್ಮಕ ಕ್ರಿಯೆ ಭಾವನಾತ್ಮಕ ಆನಂದ ಲಹರಿಯ ರೂಪವಾಗಿ ಹೊರಹೊಮ್ಮುವ ಸ್ಥಿತಿ ಎಂದೇ ಹೇಳಬಹುದು.[೮]

---

೦೬. ಶಂಕರ ಪಾಟೀಲ : ಚಿತ್ರಾಂತರಂಗ ; ಪುಟ ಸಂಖ್ಯೆ-೭

೦೭. ಶಂಕರ ಪಾಟೀಲ : ಚಿತ್ರಾಂತರಂಗ ; ಪುಟ ಸಂಖ್ಯೆ-೮

೦೮. ಶಂಕರ ಪಾಟೀಲ : ಚಿತ್ರಾಂತರಂಗ ; ಪುಟ ಸಂಖ್ಯೆ-೯

ಬರೀ ಒಂದು ಶಬ್ದ ಅರ್ಥ ಕೊಡುವುದಿಲ್ಲ. ಬರೀ ಒಂದು ವಾಕ್ಯ ಪೂರ್ಣ ಅರ್ಥ ಕೊಡುವುದಿಲ್ಲ. ಪೂರ್ತಿ ಓದಿದಾಗ ಒಂದು ಕಥೆ ಅಥವಾ ಕಾದಂಬರಿ ಅರ್ಥ ಕೊಡುತ್ತದೆ. ಅದೇ ರೀತಿ ಒಂದು ಚಿತ್ರವನ್ನು ಭಾಗ ಭಾಗವಾಗಿ ನೋಡಿ ಅರ್ಥೈಸಲು ಆನಂದಪಡಲು ಸಾಧ್ಯವಾಗುವುದಿಲ್ಲ. ಒಂದು ಚಿತ್ರವನ್ನು ಸಮಗ್ರವಾಗಿಯೇ ವೀಕ್ಷಿಸಬೇಕಾಗುತ್ತದೆ.

ಅದೇ ರೀತಿಯಾಗಿ ವ್ಯಂಗ್ಯ ಚಿತ್ರಚಿತ್ರಕಲೆಯಲ್ಲಿ ತೊಡಗಿರುವುದೇ ರೇಖಾಚಿತ್ರಗಳಿಂದ. ರೇಖಾಚಿತ್ರಗಳಿಗೆ ಕುಣಿದಾಡುವ ಸೊಬಗು ಇದೆ. ಒಬ್ಬನು ವಿವಿಧ ತೆಳು ಮತ್ತು ದಪ್ಪನೆ ಮೊನೆಗಳುಳ್ಳ ಪೆನ್ಸಿಲ್‌ಗಳಿಂದ ಅಥವಾ ಕುಂಚಗಳಿಂದ ರೇಖೆಗಳನ್ನು ಬರೆಯಬಲ್ಲನು. ಹಾಗೆಯೇ ಒಂದೇ ರೇಖೆಯು ಒಂದು ಭಾಗದಲ್ಲಿ ತೆಳುಗೆರೆ ಮತ್ತಿನ್ನೊಂದುಭಾಗದಲ್ಲಿ ದಪ್ಪಗೆರೆ ತೋರಿಸಬಲ್ಲದು. ಇದರಿಂದ ಒದಗುವ ರೇಖಾಚಿತ್ರದಲ್ಲಿ ಒಂದೆಡೆ ಪುಷ್ಟನಾದ ಭಾಗ ಇನ್ನೊಂದೆಡೆ ಹಾಗಿರಲಿ ಮೃದು ಭಾಗಗಳನ್ನು ತೋರಿಸಲಿಕ್ಕಾಗುತ್ತದೆ. ಕೇವಲ ಒಂದೆರಡು ಗೆರೆಗಳಲ್ಲಿ ಒಂದು ಜೀವಿಯ ಶರೀರ ಕೃತಿ ಅದು ನಿಂತಿರುವ ಭಂಗಿಭಾವಗಳನ್ನು ಹಾಗೆಯೇ ಅದರ ಉತ್ತಮಾಂಗ ಮುಖದ ಭಾವಭಂಗಿಗಳನ್ನು ಸ್ವಲ್ಪದರಲ್ಲೆ ಸ್ವಾರಸ್ಯವಾಗಿ ತೋರಿಸುವುದನ್ನು ರೇಖಾಚಿತ್ರಕಾರರು ಮಾಡುತ್ತಾರೆ.

ವ್ಯಂಗ್ಯ ಚಿತ್ರಕಾರರು ರೇಖಾಚಿತ್ರಕಾರರಲ್ಲಿ ಒಂದು ವಿಭಾಗದವರು. ಅವರು ಚಿತ್ರಗಳಲ್ಲಿ ಜಡವಾರ ಸ್ಥಿರತೆಯಂತೆ ಒಂದು ಬಗೆಯ ಚಲನೆಯಿರುವಂತೆ ಕಾಣಿಸುತ್ತದೆ. ಅವರ ಚಿತ್ರೀಕರಣದಲ್ಲಿ ಒಬ್ಬ ಮಾತುಗಾರನು ಅವನ ಸಾಂದರ್ಭಿಕ ಹೊರ ಆವರಣದಲ್ಲಿದ್ದು, ಏನೋ ನಮಗೆ ತಿಳಿಸುವಂತಿದೆ. ಅದು ಒಂದು ಸಂಭಾಷಣೆಯ ಪ್ರಸಂಗವಿರಬಹುದು. ಇಲ್ಲವೆ ಒಂದು ಅತಿಶಯವಾದ ಕಾರ್ಯಭಾರ ಅಲ್ಲಿ ಕಾಣಿಸಬಹುದು. ಅದನ್ನೆಲ್ಲ ಸ್ಪಷ್ಟೀಕರಿಸುವಂತೆ ಚಿತ್ರದಲ್ಲಿ ಅಥವಾ ಅದರ ಬುಡದಲ್ಲಿ ಕೆಲವು ಮಾತುಗಳು ಸೂಚಿತವಾಗಿರುತ್ತವೆ. ಚಿತ್ರ ನೋಡುತ್ತಿದ್ದಂತೆ ಆ ಪ್ರಸಂಗವು ಅನಿರೀಕ್ಷಿತವಾಗಿ ನೋಡುಗನನ್ನು ಜಾಗ್ರತೆಗೊಳಿಸಿ ಅದರ ಸಂದೇಶಕ್ಕೆ ಸ್ಪಂದಿಸುವಂತೆ ವಿಚಾರವನ್ನು ಹೊಳೆಯಿಸುತ್ತದೆ. ಸುಸ್ಪಷ್ಟ ದೃಢಗೆರೆಗಳು ಅದರಲ್ಲೂ ನಾಲ್ಕಾರು ಗೆರೆಗಳಲ್ಲೇ ನಮ್ಮ ಸುತ್ತಲೂ ಸಂಭವಿಸುತ್ತಿರುವ ರಾಜಕೀಯ ಅಥವಾ ಸಾಮಾಜಿಕ ವಿಷಯಾದಿಗಳ ಸ್ಮರಣೆ ಹುಟ್ಟುತ್ತದೆ. ಪ್ರತಿಭಾವಂತ ವ್ಯಂಗ್ಯ ಚಿತ್ರಕಾರರು ಒಂದು ಅಸಾಮಾನ್ಯ ವಿಷಯವನ್ನು ಅದು ತೀರಾ ಸಾಮಾನ್ಯವೆಂಬ ರೀತಿಯಲ್ಲಿ ಚಿತ್ರಿಸುವಾಗ ಕೊಂಕುನೋಟವಿದೆ. ಅದು ಕೊಡುವ ಸಂದೇಶದಲ್ಲಿ ಚುಚ್ಚುಮಾತು, ಬಿಚ್ಚುಮಾತು ಇರುತ್ತದೆ. ಆದರೆ ಹೇಳುವ ಮಾತುಗಳೆಲ್ಲ ಬಲು ಚಿಕ್ಕವೇ ಆಗಿದ್ದು, ಅವುಗಳ ಸಂದೇಶವು ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ವ್ಯಂಗ್ಯ ಚಿತ್ರಕಾರರಿಗೆ ವ್ಯಂಗ್ಯ ಸಂದೇಶವನ್ನು ಪ್ರಭಾವಶಾಲಿಯಾಗಿ ಕೊಡುವ ಕೌಶಲವು ಬೇಕು. ಸಾಮಾನ್ಯ ಲೋಕಜ್ಞಾನ ಕೌಶಲವೂ ಇರಬೇಕಿದೆ.[೯]

ರೈಲಿನ ಎರಡು ಕಂಬಿಗಳ ಎದುರು ನಿಂತು ನೋಡುವವನ ಕಣ್ಣಿಗೆ ಕೆಲ ಹಂತದಲ್ಲಿ ಒಂದೆಡೆ ಕೂಡಿದಂತೆ ಒಂದು ಬಿಂದುವಾಗಿ ಕಾಣುತ್ತದೆ. ನಮ್ಮ ಈ ಭೌತಿಕ ಕಣ್ಣಿಗೆ ಅಲ್ಲಿಯವರೆಗೆ ನೋಡಲು ಮಾತ್ರ ನಿಮರ್ಥ್ಯವಿದೆ. ಆದರೆ ಮನಸ್ಸಿಗೆ ಈ ಮಿತಿಯೇ ಇಲ್ಲ. ಅದು ಎಷ್ಟು ದೂರ ಬೇಕಾದರೂ ನೋಡಬಹುದು. ಕಲಾವಿದನಾದವನು

೦೯. ವಾಸುದೇವ ಕಾಣೆಮಾರ್ : ಕಲಾವಿಶೇಷಗಳು ; ಪುಟ ಸಂಖ್ಯೆ-೯

ಕಣ್ಣುಗಳನ್ನು ಮನಸ್ಸಿಗೆ ಹಚ್ಚಿ ನೋಡುತ್ತಾನೆ ಹೊರತು ಮೆದುಳಿಗಲ್ಲ. ಆದ್ದರಿಂದ ಕಲಾವಿದ ಕೇವಲ ಮಾನವನಾಗಿರುವುದಿಲ್ಲ, ಅತಿಮಾನವನಾಗಿರುತ್ತಾನೆ. ಆದ್ದರಿಂದ ಅವನು ಯಾವುದೇ ವಸ್ತುವನ್ನು ಭೇದಿಸಿ ನೋಡುವ, ಭೇದಿಸಿ ನೋಡುವ ಅತೀಂದ್ರಿಯನಾಗಿರುತ್ತಾನೆ.[೧೦]

ಅಂತೆಯೇ ನಮ್ಮ ಕಲಾವಿದರು ಮಾನವನು ಸಂಪ್ರದಾಯಗಳ ಜೊತೆಗೆ ಪರಂಪರೆಯ ಜೊತೆಗೆ ಕಲೆಯ ನಾನಾ ರೂಪಗಳು ಬೆಳೆದು ಬಂದಿರುವುದನ್ನು ನಾವು ನೋಡುತ್ತೇವೆ. ಅನೇಕ ಪ್ರಕಾರಗಳಲ್ಲಿ, ಶೈಲಿಗಳಲ್ಲಿ, ಮಾಧ್ಯಮಗಳಲ್ಲಿ ಕಲೆಯ ಪರಿಸರವನ್ನು ಗುರುತಿಸುತ್ತೇವೆ. ಮಾನವನ ಸಂಸ್ಕೃತಿಯ ಬೆಳವಣಿಗೆಯ ಜೊತೆಗೆ ಕಲೆಯ ಬೆಳವಣಿಗೆ ಪ್ರಯೋಜನಕತೆಯ ದೃಷ್ಟಿಯಿಂದ ಆಗಿರುವುದನ್ನು ಗುರುತಿಸಬಹುದಾಗಿದೆ.

ಹಾಗೆಂದೇ ಪ್ರಾದೇಶಿಕವಾಗಿ ಮಾತ್ರವಲ್ಲದೆ ಕುಶಲ ವ್ಯಂಗ್ಯ ಚಿತ್ರಕಾರರು ಹರಡಿದ್ದಾರೆ. ಅಂತವರಲ್ಲಿ ಕೆ. ಲಕ್ಷ್ಮಣ್, ಪಿ. ಮಹಮದ್, ಎಸ್.ವಿ. ಪದ್ಮಭಟ್ (ಕನ್ನಡ ಪ್ರಭಾ) ವಿ.ಜಿ. ನರೇಂದ್ರ, ವಿ.ಆರ್.ಸಿ. ಶೇಕರ್, ಗುಜ್ಜಾರಪ್ಪ, ನಾಗನಾಥ್, ಜನಾರ್ದನ್ ಸ್ವಾಮಿ, ಕುಮುದ ದೇಶಪಾಂಡೆ, ಡಾ. ಸತೀಶ್ ಶೃಂಗೇರಿ, ಜೇಮ್ಸ್‌ವಾಜ್ (ತರಂಗ), ರಾಜೇಶ್ ಯಮುನಪ್ಪ ಪೂಜಾರಿ (ವಿಜಯ ಕರ್ನಾಟಕ ಪತ್ರಿಕೆ), ಯತೀಶ ಶೆಟ್ಟಿ ಇನ್ನೂ ಹಲವಾರು ಜನ ನಮ್ಮ ಕರ್ನಾಟಕದ ವ್ಯಂಗ್ಯ ಚಿತ್ರಕಲೆಯಲ್ಲಿ ತೊಡಗಿಸಿಕೊಂಡಂತಹ ಕಲಾವಿದರು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾರೆ. ಇಂದಿನ ದೈನಿಕ ವಾರ್ತಾ ಪತ್ರಿಕೆಗಳಲ್ಲಾಗಲಿ ನಿಯತಕಾಲಿಕೆ ಹೊತ್ತಗೆಗಳಲ್ಲಾಗಲಿ ಪ್ರಕಟಿತ ಗ್ರಂಥಗಳಲ್ಲಾಗಲಿ, ಜಾಹೀರಾತುಗಳಲ್ಲಾಗಲಿ ವ್ಯಂಗ್ಯ ಚಿತ್ರಕಲೆಗೆ ಬಹಳ ಬೇಡಿಕೆಯಿದೆ. ವ್ಯಂಗ್ಯಚಿತ್ರಗಳಿಲ್ಲದ ಪತ್ರಿಕೆಗಳೆ ಇಲ್ಲವಾಗಿದೆ. ಆದ್ದರಿಂದ ವ್ಯಂಗ್ಯಚಿತ್ರ ಕಲಾವಿದರಿಗೆ ಹೆಚ್ಚಿನ ಬೇಡಿಕೆಯಿದೆ ಅಂತಹ ಅನೇಕ ವ್ಯಂಗ್ಯ ಚಿತ್ರ ಕಲಾವಿದರು ರಚಿಸಿದಂತಹ ವ್ಯಂಗ್ಯಚಿತ್ರಗಳು ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಕೆಲವು ಕ್ಯಾರಿಕೇಚರುಗಳು ಇವು ಭಿನ್ನ ವಿಭಿನ್ನ ರೀತಿಯಲ್ಲಿ ರಚಿಸಿದಂತಹ ವ್ಯಂಗ್ಯಚಿತ್ರಗಳನ್ನು ಕುರಿತು. ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಪ್ರಸ್ತುತ ಕರ್ನಾಟಕದ ವ್ಯಂಗ್ಯಚಿತ್ರಕಲೆಯು ಬೆಳೆಯಲು ಈ ಕಲೆಯ ಮೇಲಾದ ಪ್ರಭಾವ ಪ್ರೇರಣೆಯನ್ನು ವ್ಯಂಗ್ಯ ಚಿತ್ರಕಲೆಯ ತಂತ್ರ ಮತ್ತು ಬಹಳಸುವ ಶೈಲಿಗಳನ್ನು ಹಾಗೂ ವೃತ್ತಿಯಾಗಿ ಅಥವಾ ಹವ್ಯಾಸಿಯಾಗಿ ತೆಗೆದುಕೊಂಡ ಹಲವಾರು ಕರ್ನಾಟಕದ ವ್ಯಂಗ್ಯಚಿತ್ರ ಕಲಾವಿದರನ್ನು ಅವರು ರಚಿಸಿದಂತಹ ಕೆಲವು ವ್ಯಂಗ್ಯಚಿತ್ರಗಳನ್ನು ಈ ಅಧ್ಯಯನಕ್ಕಾಗಿ ಒಳಪಡಿಸಿಕೊಂಡು ನನ್ನ ಪ್ರಬಂಧದಲ್ಲಿ ಪರಿಚಯಿಸುವ ಉದ್ದೇಶವನ್ನು ಹೊಂದಲಾಗಿದೆ.

ಕರ್ನಾಟಕದ ವ್ಯಂಗ್ಯಚಿತ್ರಕಲಾ ಸಾಹಿತ್ಯದ ಕುರಿತು ಇಲ್ಲಿಯವರೆಗೆ ಒಂದು ಸ್ಪಷ್ಟವಾದ ಮಾಹಿತಿಯಾಗಲಿ, ಕಲ್ಪನೆಯಾಗಲಿ ಕಂಡುಬಂದಿಲ್ಲವೆಂದರೂ ತಪ್ಪಾಗಲಾರದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಕರ್ನಾಟಕದ ವ್ಯಂಗ್ಯಚಿತ್ರಕಲಾ ಸಾಹಿತ್ಯದ ಪ್ರಾಚೀನತೆ ಬೆಳೆದು ಬಂದ ದಾರಿ ಸ್ವರೂಪ, ಸಾಧ್ಯತೆಗಳನ್ನು ಕುರಿತು ಅಧ್ಯಯನ ಕೈಗೊಳ್ಳುವಂತಹ ಅವಶ್ಯಕತೆ ಇಂದು ತುಂಬ ಇದೆ. ಅಲ್ಲದೆ ಕರ್ನಾಟಕದ ವ್ಯಂಗ್ಯ ಚಿತ್ರಕಲಾ ಸಾಹಿತ್ಯದಲ್ಲಿರುವ

---

೧೦. ಶಂಕರ ಪಾಟೀಲ : ಚಿತ್ರಾಂತರಂಗ ; ಪುಟ ಸಂಖ್ಯೆ-೮೭

ವಿವಿಧ ಪ್ರಕಾರಗಳನ್ನು ವ್ಯವಸ್ಥಿತವಾಗಿ ವಿಂಗಡಿಸಿಕೊಂಡು ವಿಶ್ಲೇಷಿಸುವ ಈ ಮೂಲಕ ಈ ನಾಡಿನ ಜನತೆ ವ್ಯಂಗ್ಯ ಚಿತ್ರಕಲಾ ಸಾಹಿತ್ಯ ರಚನೆಯಲ್ಲಿ ಯಾವ ಬಗೆಯ ಪಾತ್ರ ವಹಿಸಿವೆ ಎನ್ನುವಂತಹ ಬಹುಮುಖ್ಯ ಸಂಗತಿಯನ್ನು ಇಂತಹ ಅಧ್ಯಯನಗಳಿಂದ ತಿಳಿದುಕೊಳ್ಳುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

**ಸ್ವರೂಪ**

ಈ ಸಂಶೋಧನ ಪ್ರಬಂಧವನ್ನು ಒಟ್ಟು ಏಳು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲ್ಪಟ್ಟಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸಲಾದ ವಿಷಯಗಳ ಸಂಕ್ಷೀಪ್ತ ಅಧ್ಯಾಯಗಳ ರೂಪವು ಕೆಳಗಿನಂತಿವೆ.

**ಒಂದನೆಯ ಅಧ್ಯಾಯ**

ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ, ವ್ಯಾಪ್ತಿಯನ್ನು ಕುರಿತು ಹೇಳಲಾಗಿದೆ.

**ಎರಡನೆಯ ಅಧ್ಯಾಯ**

ಈ ಅಧ್ಯಾಯದಲ್ಲಿ ಕರ್ನಾಟಕದ ವ್ಯಂಗ್ಯ ಚಿತ್ರಕಲೆ ಬೆಳೆದುಬಂದ ನೆಲೆ ಹಿನ್ನೆಲೆ ಬಗ್ಗೆ ವಿವರವಾಗಿ ಹೇಳಲಾಗಿದೆ.

**ಮೂರನೆಯ ಅಧ್ಯಾಯ**

ವ್ಯಂಗ್ಯ ಚಿತ್ರಗಳನ್ನು ರಚಿಸುವಾಗ ಕಲಾವಿದರು. ಆರಿಸಿಕೊಳ್ಳುವ ವಸ್ತು ವಿಷಯ ಮತ್ತು ವ್ಯಂಗ್ಯ ಚಿತ್ರಕಾರರು ಬಿಡಿಸುವ ಚಿತ್ರಗಳ ಹಲವು ರೀತಿಯ ಮಾಧ್ಯಮಗಳ ಕುರಿತು ವಿವೇಚಿಸಲಾಗಿದೆ.

**ನಾಲ್ಕನೆಯ ಅಧ್ಯಾಯ**

ಕರ್ನಾಟಕದ ವಿವಿಧ ಸ್ಥಳಗಳಲ್ಲಿ ವಾಸಿಸುತ್ತಿರುವ ವ್ಯಂಗ್ಯಚಿತ್ರಕಾರರ ವ್ಯಂಗ್ಯಚಿತ್ರಗಳ ಮೇಲಾದ ಪ್ರಭಾವ, ಪ್ರೇರಣೆ ತಂತ್ರ, ಶೈಲಿ, ವಿವರವನ್ನು ಪರಿಚಯಿಸಿ ಕೊಡಲಾಗಿದೆ.

**ಐದನೆಯ ಅಧ್ಯಾಯ**

ಈ ಅಧ್ಯಾಯದಲ್ಲಿ ವ್ಯಂಗ್ಯ ಚಿತ್ರಕಲೆಯ ಸಾಹಿತ್ಯ ಸಮೀಕ್ಷೆ ಕುರಿತು ಬಂದ ಸಾಹಿತ್ಯ ಮತ್ತು ಲೇಖನಗಳನ್ನು ಕುರಿತು ಇಲ್ಲಿ ಸಮೀಕ್ಷಾ ಅಧ್ಯಯನ ಮಾಡಲಾಗಿದೆ.

**ಆರನೆಯ ಅಧ್ಯಾಯ**

ಕರ್ನಾಟಕ ಚಿತ್ರಕಲೆಯ ವ್ಯಂಗ್ಯ ಚಿತ್ರಕಲಾವಿದರು ಮತ್ತು ಅವರ ಸ್ಥಿತಿ-ಗತಿ ಪ್ರಮುಖ ಪ್ರಾತಿನಿಧಿಕ ಕೆಲವು ಕಲಾವಿದರ ಕುರಿತು ಅವರ ಸಾಧನೆಯ ಬಗೆಗೆ ವಿವೇಚಿಸಲಾಗಿದೆ.

**ಏಳನೆಯ ಅಧ್ಯಾಯ**

ಈ ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು ಮೇಲಿನ ಎಲ್ಲಾ ಅಧ್ಯಾಯಗಳ ಫಲಿಗಳನ್ನು ಸಮೀಕ್ಷಿಸಿದೆ.

## ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಕರ್ನಾಟಕದ ವ್ಯಂಗ್ಯ ಚಿತ್ರಕಲೆ ಎಂಬ ವಿಷಯಕ್ಕೆ ಕುರಿತದ್ದಾಗಿದ್ದು. ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದಂತಹ ಕೆಲವು ಕಲಾವಿದರನ್ನು ಹಾಗೂ ಪತ್ರಿಕೆ, ವಾರ ಪತ್ರಿಕೆ ನಿಯತಕಾಲಿಕ ಕಿರುಹೊತ್ತಿಗೆ ಹೀಗೆ ಹತ್ತು ಹಲವು ರೀತಿಯಲ್ಲಿ ರಚಿಸುತ್ತಿರುವ ಕೆಲವು ವ್ಯಂಗ್ಯ ಚಿತ್ರಕಲಾವಿದರನ್ನು ಸಂದರ್ಶಿಸಿ ಈ ಅಧ್ಯಯನದ ವ್ಯಾಪ್ತಿ ತಂದುಕೊಳ್ಳಲಾಗಿದೆ. ಈ ವ್ಯಂಗ್ಯ ಚಿತ್ರ ಕಲೆಯ ಬಗ್ಗೆ ಕೆಲವಾರು ವರ್ಷಗಳಿಂದ ತಮ್ಮನ್ನು ಈ ಕ್ಷೇತ್ರಕ್ಕೆ ತೊಡಗಿಸಿ ಕೊಂಡಿರುವ ಕೆಲವು ಕರ್ನಾಟಕದ ವಿವಿಧ ಭಾಗಗಳಲ್ಲಿ ವಾಸಿಸುತ್ತಿರುವ ಕಲಾವಿದನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನನಗೆ ಲಭ್ಯವಾದಂತಹ ಕೆಲವು ಕಲಾವಿದರನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡು ಪ್ರಸ್ತುತ ಅಲ್ಲದೆ ವ್ಯಂಗ್ಯಚಿತ್ರಕಲಾ ಸಾಹಿತ್ಯ ಸೀಮಿಕ್ಸೆಗೆ ನನಗೆ ದೊರೆತಂಹ ಸಂಕಲನಗಳು, ಲೇಖನಗಳು, ಮತ್ತು ಕೆಲವು ಪುಸ್ತಕಗಳನ್ನು ಇಲ್ಲಿ ಕೆಲವನ್ನು ಪರಿಚಯಿಸಿ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳುವ ಮೂಲಕ ಪ್ರಸ್ತುತ ಅಧ್ಯಯನಕ್ಕೆ ಒಂದು ವ್ಯಾಪ್ತಿಯನ್ನು ಅಳವಡಿಸಿಕೊಳ್ಳಲಾಗಿದೆ.

## ಇದುವರೆಗೆ ನಡೆದ ಅಧ್ಯಾಯಗಳು

ಆರ್.ಕೆ. ಲಕ್ಷ್ಮಣ್ ಅವರ ಸಾರ್ವಕಾಲಿಕರ ಜನಪ್ರಿಯ ಚಿತ್ರಸಂಪುಟಗಳಿಗೆ ಹೋಲಿಸಿದರೆ ಕನ್ನಡದಲ್ಲಿ ಪ್ರಕಟಣೆಗಳು ತುಂಬಾ ಕಡಿಮೆ. ಕನ್ನಡದಲ್ಲಿ ಎರಡು ಮತ್ತು ಇಂಗ್ಲೀಷಿನಲ್ಲಿ ಒಂದು ಸಂಪುಟ ಪ್ರಕಟಿಸಿದ ಮೂರ್ತಿಯವರ ಮೂರೂ ಪ್ರಕಟಣೆ ಮೂರು ರೀತಿಯದಾಗಿದ್ದು, ಕಲಾಭ್ಯಾಸಿಗಳಿಗೆ ಪಠ್ಯಪುಸ್ತಕದಂತಿವೆ. ೧೯೫೦ಳಕ್ಕಿಂತಲೂ ಹಿಂದೆ ನಗುವ ನಂದ ಪತ್ರಿಕೆ ಪ್ರಕಟಿಸಿದೆ 'ವಿನೋದ ವಿಹಾರ'ವೇ ಮೊದಲ ವ್ಯಂಗ್ಯಚಿತ್ರ ಸಂಕಲನ. ಜಿ. ನಾರಾಯಣ ಅವರು ೧೯೫೬ರಲ್ಲಿ 'ವಿನೋದ ಲಹರಿ', ನಂತರ ೧೯೭೮ರಲ್ಲಿ 'ವಿನೋದ ವಾಹಿನಿ' ಕನ್ನಡ ಸಾಹಿತ್ಯ ಪರಿಷತ್ತು 'ವ್ಯಂಗ್ಯದರ್ಪಣ' ಪ್ರಕಟಿಸಿತು. ಎಂ. ವಿಶ್ವನಾಥ್ ೧೯೭೫ರಲ್ಲಿ ಕನ್ನಡದಲ್ಲಿ 'ನಗೆಮಲ್ಲಿಗೆ' ಮತ್ತು ಇಂಗ್ಲೀಷ್‌ನಲ್ಲಿ 'Smile a While' ಪ್ರಕಟಿಸಿದ್ದಾರೆ. ಇದಲ್ಲದೆ ಪ್ರಕಾಶ್ ಶೆಟ್ಟಿ, ಕೆಂ.ಶ್ರೀ. ನಂಜಪ್ಪ, ವಿ. ಗೋಪಲ್ ಕೆ.ಆರ್.ಸ್ವಾಮಿ, ಎಸ್.ಕೆ ನಾಡಿಗ್, ಪಿ. ಮಹಮ್ಮದ್, ಜಿ.ಎಂ. ಬೊಮ್ಮನಹಳ್ಳಿ, ವೆಂಕಟಭಟ್ಟ ಎಡನೀರು ತಲಾ ಒಂದೊಂದು ಸಂಕಲನ ಪ್ರಕಟಿಸಿದ್ದಾರೆ. ೧೯೮೮ರಲ್ಲಿ ಎಸ್. ಶ್ರೀನಿವಾಸಲು ಅವರು 'ವ್ಯಂಗ್ಯ ಲಹರಿ' ಪ್ರಕಟಿಸಿದ್ದಾರೆ. ನಾಡಿಗ್ ಅವರ 'ನಗೆಕಾರಂಜಿ'ಯನ್ನು ನವಕರ್ನಾಟಕ ಪ್ರಕಟಿಸಿದೆ. ಬದಲಾಗಿರುವ ಪ್ರಸ್ತುತ ಪರಿಸ್ಥಿತಿಯಲ್ಲಿ ವ್ಯಂಗ್ಯ ಚಿತ್ರ ಸಂಕಲನಗಳಿಗೆ ಒಳ್ಳೆಯ ಬೇಡಿಕೆಯಿದ್ದು, ಇನ್ನೂ ಉತ್ತಮವಾದ ಪ್ರಕಟಣೆಗಳು ಹೊರ ಬರಬೇಕಾಗಿದೆ. ಈ ಕ್ಷೇತ್ರದ ಬಗ್ಗೆ ಅಧ್ಯಯನಗಳು ನಡೆಯಬೇಕಾಗಿದೆ. ಕನ್ನಡ ಸಾಹಿತ್ಯ ಪರಿಷತ್ ವಿನೋದ ಚಿತ್ರಗಳ ಬಗ್ಗೆ ಪ್ರಕಟಿಸಿದೆ. ಎಂ.ಪಿ. ಆಚಾರ್ಯ ವ್ಯಂಗ್ಯಚಿತ್ರಗಳ ಆಸಕ್ತಿಯಿರುವವರಿಗೆ ಅಂಚೆ ಮೂಲಕ ಈ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಅಲ್ಲದೆ ವ್ಯಂಗ್ಯ ಚಿತ್ರಗಳ ರಚನೆ ಬಗ್ಗೆಯು ಮಾಹಿತಿಯನ್ನು ನೀಡಲಾಗಿದೆ. ಈ ಮೇಲಿನ ಎಲ್ಲ ಪ್ರಕಟಣೆಗಳಲ್ಲಿ ಅಲ್ಪ ಸ್ವಲ್ಪ ವ್ಯಂಗ್ಯಚಿತ್ರದ ಮಾಹಿತಿ ಸಿಗುತ್ತದೆ. ಆದರೆ ಸಮಗ್ರ ಕರ್ನಾಟಕ ವ್ಯಂಗ್ಯಚಿತ್ರಕಲೆಯ ಬಗ್ಗೆ ಅಧ್ಯಯನ ಇಲ್ಲಿಯವರೆಗೆ ಅಧ್ಯಯನ ನಡೆಯದೆ ಇರುವ ಕೊರತೆ ಇತ್ತು ಪ್ರಸ್ತುತ ಅಧ್ಯಯನವನ್ನು ಈ ದಿಸೆಯಲ್ಲಿ ನಡೆಸಲಾಗಿದೆ.

## ವೈಧಾನಿಕತೆ

ಈ ಅಧ್ಯಯನಕ್ಕೆ ಎರಡು ರೀತಿಯ ಆಕಾರಗಳನ್ನು ಬಳಸಿಕೊಳ್ಳಲಾಗಿದೆ.

೧. ಮೂಲ ಆಕರ ಸಾಮಗ್ರಿ

೨. ಆನುಷಂಗಿಕ ಆಕರ ಸಾಮಗ್ರಿ

### ೧. ಮೂಲ ಆಕರ ಸಾಮಗ್ರಿ

ಸಂಶೋಧನೆಯ ಮೂಲ ಆಕರ ಸಾಮಗ್ರಿಗಳಲ್ಲಿ ಮುಖ್ಯವಾದದ್ದು ಕ್ಷೇತ್ರಕಾರ್ಯದ ಮೂಲಕ ಸಂದರ್ಶನ, ಚರ್ಚೆ, ವ್ಯಂಗ್ಯಚಿತ್ರಕಾರ ಪರಿಚಯ, ವ್ಯಂಗ್ಯಚಿತ್ರಗಳ ಛಾಯಾಚಿತ್ರಣ ಮಾಡುವುದು ಹಾಗೂ ವ್ಯಂಗ್ಯ ಚಿತ್ರಕಲಾವಿದರ ಸ್ಥಿತಿ ಗತಿ ಹಾಗೂ ಮಾಧ್ಯಮಗಳ ಬೇಡಿಕೆ, ವ್ಯವಸ್ಥೆಯನ್ನು ಹಾಗೂ ವ್ಯಂಗ್ಯ ಚಿತ್ರಗಳಿಗೆ ಬಳಸುವಂತಹ ಹಲವು ಮಾಧ್ಯಮಗಳ ಬಗ್ಗೆ ಕುರಿತು ಸಂದರ್ಶನಗಳೊಂದಿಗೆ ಮಾಹಿತಿಯನ್ನು ಸಂಗ್ರಹಿಸಿಕೊಂಡು ಈ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ.

### ೨. ಆನುಷಂಗಿಕ ಆಕರ ಸಾಮಗ್ರಿ

ಸಂಶೋಧನಾ ಮಹಾಪ್ರಬಂಧಗಳು, ಪ್ರಕಟಿತ ಅಪ್ರಕಟಿತ ಕೃತಿಗಳ ನಿಘಂಟುಗಳು, ವಾರ್ತಾಪತ್ರಿಕೆಗಳು, ನಿಯತಕಾಲಿಕ ಹೊತ್ತುಗೆಗಳು ಪ್ರಕಟಿತ ಗ್ರಂಥಗಳು ಕೆಲವು ವ್ಯಂಗ್ಯ ಚಿತ್ರಕಲಾ ಸಂಕಲನಗಳನ್ನು ಸಂಗ್ರಹಿಸಿಕೊಂಡು ಹಾಗೂ ಜಾಹಿರಾತುಗಳಲ್ಲಿ ಸಂಗ್ರಹಿಸಿದ ಕಲಾವಿದರ ಸ್ಥಿತಿ-ಗತಿಗಳ ಬಗ್ಗೆ ಹಾಗೂ ಕೆಲವು ವ್ಯಂಗ್ಯಚಿತ್ರಕಾರರ ಪುಸ್ತಕಗಳಿಂದ ಈ ವ್ಯಂಗ್ಯ ಚಿತ್ರಗಳಿಗೆ ಇರುವ ಬೇಡಿಕೆಗಳ ಬಗ್ಗೆ ತಿಳಿದುಕೊಂಡು ವ್ಯಂಗ್ಯ ಚಿತ್ರಕಾರರು ಇರುವ ಸ್ಥಳಗಳಿಗೆ ಬೇಟಿಕೊಟ್ಟು, ಕೆಲವು ದಿನಪತ್ರಿಕೆಗಳ ಕಛೇರಿಗೆ ಮತ್ತು ಕಲಾವಿದರ ಕೆಲವು ಸ್ನೇಹಿತರ ಜೊತೆ ಸಂದರ್ಶಿಸಿ ವ್ಯಂಗ್ಯಚಿತ್ರಕಲೆ ಬಗ್ಗೆ ಹಾಗೂ ವ್ಯಂಗ್ಯಚಿತ್ರಕಾರರ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿಕೊಂಡು ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

### ಸಂದರ್ಶನ

ವಿಶೇಷವಾಗಿ ನಮ್ಮ ಕರ್ನಾಟಕದ ಕೆಲವು ಸ್ಥಳಗಳಿಗೆ ಬೇಟಿಕೊಟ್ಟು ವ್ಯಂಗ್ಯ ಚಿತ್ರ ಕಲಾವಿದರನ್ನು ಸಂದರ್ಶಿಸಿ ಅವರ ಸಾಂಸ್ಕೃತಿಕ ಪರಿಸರ, ಅವರ ಶಿಕ್ಷಣ ಹಾಗೂ ಈ ಕಲೆಯನ್ನು ಆಯ್ದುಕೊಳ್ಳಲು ಪ್ರಭಾವ, ಪ್ರೇರಣೆ, ಆಸಕ್ತಿಯ ಬಗ್ಗೆ ತಿಳಿದುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಅಲ್ಲದೆ ಈ ವ್ಯಂಗ್ಯಚಿತ್ರಕಲೆ ಪ್ರಸ್ತುತ ದಿನಗಳಲ್ಲಿ ಇದರ ಬೇಡಿಕೆ ಹಾಗೂ ವ್ಯಂಗ್ಯಚಿತ್ರಕಲೆಯಿಂದ ಸಮಾಜದ ಮೇಲೆ ಪರಿಹಾರಗಳ ಬಗ್ಗೆ ಚರ್ಚಿಸಿ, ಕೆಲವು ನಿಯತಕಾಲಿಕ ವಾರಪತ್ರಿಕೆ, ವಾರ್ತಾಗಳಿಗೆ ಬರೆಯುವಂತಹ ನಮ್ಮ ಕರ್ನಾಟಕದಲ್ಲಿಯೇ ನೆಲೆಸಿರುವಂತಹ ಹಲವು ಜನ ವ್ಯಂಗ್ಯ ಚಿತ್ರಕಾರರನ್ನು ಸಂದರ್ಶಿಸಿ ಅದರಿಂದ ಹಾಗೂ ಇವರು ಕಲಿತಂತಹ ಶಾಲೆಯ ಗುರುಗಳು ಈ ಕಲೆಯನ್ನು ಸ್ವೀಕರಿಸಲು ಪ್ರೇರೇಪಿಸಿದಂತಹ ಗುರುಗಳು, ಸ್ನೇಹಿತರು, ಬಂಧು ಮಿತ್ರರಿಂದ ವಿಷಯವನ್ನು ಸಂಗ್ರಹಿಸಿಕೊಳ್ಳಲಾಗಿದೆ. ಅಲ್ಲದೆ ಕಲಾವಿದರ ರಚಿಸಿದ ಕೆಲವು ವ್ಯಂಗ್ಯಚಿತ್ರಗಳನ್ನು ಅವುಗಳನ್ನು ವಿಂಗಡಿಸಿಕೊಂಡು ಅವುಗಳ ಬಗ್ಗೆ ಚರ್ಚಿಸಲಾಯಿತು. ಕೆಲವು ಜನ ಹಿರಿಯ ಕಿರಿಯ ಕಲಾವಿದರೊಂದಿಗೆ ಕರ್ನಾಟಕದ ವ್ಯಂಗ್ಯ

ಚಿತ್ರಕಲೆ ಹಿಂದಿನ ರೀತಿ ಹಾಗೂ ಇಂದಿನ ರೀತಿಯ ಕಾಲದ ವ್ಯಂಗ್ಯಚಿತ್ರಗಳ ಬಗ್ಗೆ ಬೇಡಿಕೆಗಳನ್ನು ವಸ್ತು ವಿಷಗಳು ಹಾಗೂ ವ್ಯವಸ್ಥೆಯ ಬಗ್ಗೆ ಕಲಾವಿದರೊಂದಿಗೆ ಚರ್ಚಿಸಲಾಯಿತು. ಅಲ್ಲದೆ ಕೆಲವು ದೊರೆದಂತಹ ಮಾಹಿತಿಯನ್ನು ಸಂಗ್ರಹಿಸಿಕೊಂಡು ಅವನ್ನು ಪ್ರಬಂಧದ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಛಾಯಾ ಚಿತ್ರಣ**

ವ್ಯಂಗ್ಯ ಚಿತ್ರಕಲಾವಿದರನ್ನು ಬೇಟಿಮಾಡಿ ಅವರು ರಚಿಸಿದಂತಹ ಕೆಲವು ವ್ಯಂಗ್ಯ ಚಿತ್ರಗಳನ್ನು ಛಾಯಾ ಚಿತ್ರಣವನ್ನು ಮಾಡಿಕೊಂಡು, ಕೆಲವು ವಾರದ ಹಾಗೂ ತಿಂಗಳ ಪತ್ರಿಕೆಗಳಲ್ಲಿ ಪ್ರಕಟವಾಗುವಂತಹ ವ್ಯಂಗ್ಯಚಿತ್ರಗಳು ಛಾಯಾಚಿತ್ರಣವನ್ನು ಮಾಡಿಕೊಳ್ಳಲಾಯಿತು. ವ್ಯಂಗ್ಯ ಚಿತ್ರ ಕಲಾವಿದರ ಮನೆಗಳಿಗೂ, ಕಛೇರಿಗಳಿಗೂ ಹೋಗಿ ಅವರ ಭಾವಚಿತ್ರ ಕುಟುಂಬದ ಚಿತ್ರಗಳನ್ನು ಸಾಹ ತೆಗೆದುಕೊಳ್ಳಲಾಯಿತು. ಇನ್ನೂ ಕೆಲವು ಕಲಾವಿದರು ಸ್ಥಳದಲ್ಲಿಯೇ ರಚಿಸಿದ ವ್ಯಂಗ್ಯ ಚಿತ್ರದ ಛಾಯಾಚಿತ್ರವನ್ನು ಮಾಡಿಕೊಳ್ಳಲಾಯಿತು. ಈ ಎಲ್ಲಾ ರೀತಿಯ ಛಾಯಾ ಚಿತ್ರಗಳನ್ನು ಈ ಪ್ರಬಂಧಕ್ಕೆ ಬಳಸಿಕೊಳ್ಳಲಾಗಿದೆ.

* * *



ಭಾರತೀಯ ಭಾಷೆಯಲ್ಲಿ "ಕಲೆ" ಎಂಬ ಪದ ಇಂಗ್ಲೀಷಿನ "ಆರ್ಟ್" (Art)ಎಂಬ ಪದದಿಂದ, ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥದಲ್ಲಿ ಪ್ರಯೋಗವಾಗುತ್ತಿದೆ. "ಕಲೆ" ಎಂಬ ಪದಕ್ಕೆ ನಿಷ್ಕೃಷ್ಟ ವಿವರಣೆಯಿತ್ತು ಪದದ ವ್ಯಾಪ್ತಿಯನ್ನು ನಿಶ್ಚಿತಗೊಳಿಸುವುದು ಸುಲಭಸಾಧ್ಯವಲ್ಲ. ಕೆಲವು ಪದಗಳ ಅರ್ಥ ಎಲ್ಲ ಕಾಲಕ್ಕೂ ಒಂದೇ ಬಗೆಯಾಗಿರದೆ ಆಗಾಗ ಬದಲಾಗುವುದು. ವಿವರಣೆಯಲ್ಲಿ ಎಷ್ಟೇ ವ್ಯತ್ಯಾಸವಿರಲಿ, ವೈವಿಧ್ಯತೆಯಿರಲಿ, ಕಲೆಯ ಪ್ರಧಾನ ಗುರಿ 'ಆನಂದ', ಆತ್ಮಾನಂದಿಂದಲೇ ಕಲೆಯ ಜನ್ಮ ಎನ್ನಲು ಅಡ್ಡಿ ಇಲ್ಲ. ನಮ್ಮ ಸಂಸ್ಕೃತಿಯ ಲಾಂಛನರೂಪವಾದ ಶೃತಿಸಂಹಿತೆಗಳೂ ಇದನ್ನೇ ಘೋಷಿಸುತ್ತವೆ.

ಆಶಾವಾದಿತ ಪ್ರಪಂಚದಲ್ಲಿ ಮಾನವನ ಇಂದ್ರಿಯ, ಮನಸ್ಸು, ಬುದ್ಧಿ, ಆತ್ಮ ಆಶಿಸುವುದು ಒಂದಲ್ಲ; ಹಲವಾರು ಬಗೆ ತನ್ನ ಜೀವನ ಸುಖಮಯ, ಶಾಂತಿಮಯ, ಆನಂದಮಯವಾಗಬೇಕೆಂದು ಅವನ ಹಂಬಲ. ಈ ಆಶಯದಿಂದಲೆ ಅವನು ಕಷ್ಟಪಟ್ಟು ಕಲಿಯುವನು. ದುಡಿಯುವನು. ಆಡುವನು, ಬೇಡುವನು! ಅಂತೇ ಹಲವಾರು ಬಗೆಯಲ್ಲಿ ಯತ್ನಿಸುವನು.[೧]

ಆದರೂ ಅದೆಷ್ಟು ಮಂದಿಗೆ ಆಶಿಸುವ ಆನಂದ ದೊರೆಯುವುದೋ ನಾನರಿಯೇ! ಶಾರೀರಕ ಕ್ಷುಧಾ ತೃಪ್ತಿಯಾಗದೆ ಜೀವನಕ್ಕೆ ಶಾಂತಿ ದೊರೆಯುವುದು. ರಸನ ವಾಶಿಸುವುದು ಬಗೆ ಬಗೆಯ ತಿಂಡಿ ತಿನಿಸುಗಳನ್ನು; ಘ್ರಾಣಕ್ಕೆ ಗಂಧಬೇಕು; ಕರ್ಣಕ್ಕೆನಾದಬೇಕು: ನಯನ ರೂಪು ನೋಡಿ, ಸ್ಪರ್ಶನ ಅಂಗವೇಷ್ಟನಗೊಂಡು ಆನಂದಪಡುವುದು. ಆದರೆ ಜೀವನಕ್ಕೆ ಇವುಗಳಿಂದ ತೃಪ್ತಿ ದೊರೆಯದು. ಅದು ಪ್ರೇಮವನ್ನುಂಟು ರಸಾಸ್ವಾದನೆಗೈದು ತಣಿಯುತ್ತದೆ. ಮತ್ತಾವುದರಿಂದಲೂ ಅದು ತೃಪ್ತಿಯಪಡಲಾರದು. ಲಲಿತಕಲೆಗಳಲ್ಲಿ ಆತ್ಮಾನಂದವೀಯಬಲ್ಲ ಈ ರಸಸಿಂಧು ಅಪಾರವಾಗಿದೆ. ಈ ರಸಾನುಭವ ಎಲ್ಲರಿಗೂ ಬೇಕು. ಕವಿಗಳೂ, ಕಲಾವಿದರು ಈ ಬಗೆಯರ ರಸವಾಹಕರು ಜತೆಗೆ ರಸವೊಸರುವ ಸವಿಯೂಟವಿಡಬಲ್ಲ ರಸಋಷಿಗಳಿರವರು.

ಸೃಷ್ಟಿಯ ಆಂತರಿಕ ಮತ್ತು ಬಾಹ್ಯ ರಹಸ್ಯವನ್ನು ಭೇದಿಸುವುದಕ್ಕೆ ಕಲಾವಿದ ಒಂದು ಕಲಾಕೃತಿಯನ್ನು ನಿರ್ಮಿಸುತ್ತಾನೆ ಮತ್ತು ಪರ್ಯಾಯದಿಂದ ಮತ್ತೊಂದು ರಹಸ್ಯವನ್ನು ಸೃಷ್ಟಿಸುತ್ತಾನೆ. ಇಂಥ ರಹಸ್ಯದ ನಿರಂತರತೆಯಿಂದಲೇ ಕಲೆ ಸದಾಕಾಲ ಜೀವಂತವಾಗಿರುತ್ತದೆ. ಬಣ್ಣ ಮತ್ತು ರೇಖೆಗಳಿಂದ ರೂಪಗೊಳ್ಳುವ

---

ಅಡಿಟಿಪ್ಪಣಿಗಳು

೦೧. ಪಿ.ಆರ್. ತಿಪ್ಪೇಸ್ವಾಮಿ : ಚಿತ್ರಕಲಾ ಪ್ರಪಂಚ ; ಪುಟ ಸಂಖ್ಯೆ-೨೧೯

ಕಲಾಕೃತಿ ಕ್ರಮೇಣ 'ಸ್ಪೇಸ್'ನ್ನು ತನ್ನ ವಶದಲ್ಲಿ ಮಾಡಿಕೊಳ್ಳುತ್ತದೆ. ಹಾಗೆಯೇ ಒಂದು ವಿಶಿಷ್ಟ ಪರಿಸರದಲ್ಲಿ ಪ್ರವಹಿಸುವ ಕಾಲವನ್ನು ಬಂದಿಸುತ್ತದೆ. ಕಲೆ ಯಾವಾಗಲೂ ತನ್ನ ಸೀಮಾರೇಖೆಯಿಂದ ಹೊರಬರುವ ಪ್ರಯತ್ನ ಮಾಡುತ್ತವೆ ಮತ್ತು ಸಂಪ್ರದಾಯದ 'ಅತಿ'ಯಿಂದ ಮುಕ್ತವಾಗಿರುತ್ತದೆ. ಕಲೆಯ ಈ ಮುಕ್ತತೆಯಿಂದ ಕಲಾವಿದ ತಾನೂ ಸಹ ಬಂಧ ಮುಕ್ತನಾಗುತ್ತಾನೆ. ಸೌಂದರ್ಯದ ದರ್ಶನವಾಗಬೇಕಾದರೆ ವ್ಯಕ್ತಿಗೆ ಸ್ವಾತಂತ್ರ್ಯಬೇಕು. ದಾಸ್ಯದಲ್ಲಿ ಸೌಂದರ್ಯವನ್ನು ಅನುಭವಿಸುವ ಶಕ್ತಿ ಇರುವುದಿಲ್ಲ. ಪ್ರಕೃತಿಯ ರಹಸ್ಯಮಯ ಸೌಂದರ್ಯವನ್ನು ಪ್ರಾಮಾಣಿಕತೆಯಿಂದ ಮತ್ತು ವಿನಯಶೀಲತೆಯಿಂದ ಉದ್ಘಾಟಿಸುವ ಕೃತಿ ಕಲಾಕೃತಿಯಾಗುತ್ತದೆ. ಕಲಾವಿದರ ಪ್ರಾಮಾಣಿಕತೆಯೂ ಅವನ ಕಲೆಯಿಂದ ಪ್ರಕಟವಾಗುತ್ತದೆ.[೨]

ಒಬ್ಬ ವ್ಯಕ್ತಿ ಅಥವಾ ಕಲಾವಿದರಲ್ಲಿ ಸೌಂದರ್ಯ ಕಲ್ಪನೆ ಏನಿದ್ದರೂ, ಆ ಕಲ್ಪನೆ ತನ್ನ ಪರಿಸರದ ಜೊತೆಗೆ ವಾದಿ-ಸಂವಾದಿ ಸಂಬಂಧವನ್ನು ಸ್ಥಾಪಿಸಿಕೊಳ್ಳದಿದ್ದರೆ, ಆ ಕಲ್ಪನೆ ಕಲಾಕೃತಿಯಾಗಿ ರೂಪಗೊಂಡರೂ, ಅರ್ಥವಂತಿಕೆಯಿಂದ ವಂಚಿತವಾಗುತ್ತದೆ. ಸೌಂದರ್ಯ, ಸಂಬಂದದಲ್ಲಿ ಮೂಡಿಬರುತ್ತದೆ. ಹೊರತಾಗಿ ಏಕಾಕಿಯಾಗಲ್ಲ. ಸಂಬಂಧ ಆನಂದದಾಯಕವಾಗಿದ್ದರೆ ಅಲ್ಲಿ ಸೌಂದರ್ಯ ಹುಟ್ಟುತ್ತದೆ. ನಮ್ಮ ಪಂಚೇಂದ್ರಿಯಗಳು ಬಾಹ್ಯ ವಿಶ್ವದ ಅಸ್ತಿತ್ವವನ್ನು ಅರಿತುಕೊಳ್ಳಲು ಸಹಾಯಕವಾಗುತ್ತವೆ. ಪಂಚೇಂದ್ರಿಯಗಳಿಗೆ ಸಂವೇದನೆಗಳನ್ನು ಗ್ರಹಿಸುವ ವಿಶಿಷ್ಟ ಶಕ್ತಿಯಿರುತ್ತದೆ. ಆ ಶಕ್ತಿಗಿಂತ ಹೆಚ್ಚು ಅಥವಾ ಕಡಿಮೆ ಪ್ರಮಾಣದಲ್ಲಿ ಯಾವ ಅನುಭವವೂ ಪಂಚೇಂದ್ರಿಯಗಳು ಗ್ರಹಿಸುವುದಕ್ಕೆ ಮತ್ತು ಸಹಿಸುವುದಕ್ಕೆ ಸಿದ್ದವಾಗಿರುವುದಿಲ್ಲ. ಆದ್ದರಿಂದ ವಸ್ತು ಜಗತ್ತಿನೊಂದಿಗೆ ಅವುಗಳ ಸಂಬಂಧ ಒಂದು ಮಿತಿಯಲ್ಲಿರುತ್ತದೆ. ಒಬ್ಬ ಕಲಾವಿದರ 'ಮಿತಿ' ಅಥವಾ 'ಅಲೆ'ಗಳನ್ನು ಅತಿಕ್ರಮಿಸದಿದ್ದರೆ ಮಾತ್ರ ಕಲಾವಿದನ ಕೃತಿ ಕಲೆಯಾಗುತ್ತದೆ.

ವಿನೋದವೆಂದರೆ ಹಾಸ್ಯದಲ್ಲಿ ಪಡೆಯುವ ಆನಂದ ಎಂದೆನ್ನಬಹುದು. ಅದು ಹಾಸ್ಯವನ್ನು ಪಡೆಯುವ ಕಲೆಯೂ ಹೌದು. ಹಾಸ್ಯಗಾರರು ವಿನೋದವನ್ನುಕೊಟ್ಟು ಇತರರನ್ನು ಸಂತೋಷಪಡಿಸುವುದಲ್ಲದೆ ತಾವು ಸಂತೋಷಪಡುತ್ತಾರೆ.[೩] ವಿನೋದವು ನಗು ಪ್ರಸಂಗದ ಸನ್ನಿವೇಶವನ್ನು ಕಣ್ಣಿಗೆ ತರುತ್ತದೆ. ಅಣಕ, ಗೇಲಿ, ವಿಚಿತ್ರ, ಸ್ನೇಹ, ಮಾಧುರ್ಯ, ಸಂಭ್ರಮ ಇಂತಹವುಗಳನ್ನು ನಡುನಡೆವಳಿಕೆ, ನಗುಭಾವ ನಗುಮಾತುಗಳಲ್ಲಿ ಹೊರಗೆಡಹುತ್ತದೆ. ಪುಸ್ತಕದಲ್ಲಿ ಕೆಲವು ಸಾಲುಗಳು, ನಾಟಕಗಳಲ್ಲಿ ಕೆಲವು ಸಂದರ್ಭಗಳು ಮತ್ತು ಸಂಭಾಷಣೆಗಳಲ್ಲಿ ಕೆಲವು ತಿರುಳುಗಳು ನಗುವನ್ನು ಸಂಗ್ರಹಿಸಿಟ್ಟಿರುತ್ತವೆ. ಅಂತಹವುಗಳನ್ನು ಹುಡುಕಿ ಈಚೆಗೆ ತೆಗೆಯುವುದು ವಿನೋದಿಗಳ ಕೆಲಸ. ಇಂತಹ ಕೆಲಸದಲ್ಲಿ 'ವ್ಯಂಗ್ಯಚಿತ್ರಕಲೆ'ಯು ಒಂದಾಗಿದೆ. ವ್ಯಂಗ್ಯ ಚಿತ್ರಕಲಾವಿದನಿಗೆ ಇಂತಹ ಶೋಧನೆ ಮತ್ತು ಸಂಗ್ರಹ ಬುದ್ಧಿಯಿರಬೇಕಲ್ಲದೆ ಸಂದರ್ಭಗಳಿಗೆ ವಿನೋದದ ಚಟುಕವನ್ನು ಹೊಂದಿಸಿ ಹೊರಹೊಮ್ಮಿಸುವ ಕುಶಲತೆ ಈ ಕಲಾವಿದಗೆ ಬೇಕಿರುತ್ತದೆ. ನವುರಾದ ಸೂಕ್ಷ್ಮ ಹಾಸ್ಯ ಸುಳಿಸಬೇಕಲ್ಲದೆ ಒತ್ತಾಯದ ನಗು ಹೇರಲಾಗದು. ಒಂದು ಹಾಸ್ಯದ ತುಣುಕು ಚಿತ್ರವನ್ನು ಕಂಡುಕೂಡಲೆ

೦೨. ಹಿರೇಮಠ ಬಿ.ಆರ್ : ನಿಜದ ನೆಲೆ ; ಪುಟ ಸಂಖ್ಯೆ-೨೮೨

೦೩. ವಾಸುದೇವ ಕಾಣೆಮಾರ್ : ಕಲಾ ಪ್ರಕಾರಗಳು ; ಪುಟ ಸಂಖ್ಯೆ-೮೫

ಗೊಳ್ಳೆಂದು ನಕ್ಕು ಬಿಡುವುದು ವಿನೋದಕ್ಕಾಗಿ ಮನುಷ್ಯರಿಗೆ ನಗುವು ಪ್ರಾಕೃತಿ ಸಿದ್ಧವಾಗಿರುವುದರಿಂದ ಅದನ್ನು ಸಹಜ ಧರ್ಮವಾಗಿ ಪೋಷಿಸಿಕೊಂಡು ಬಂದರೆ ಅದರಿಂದ ಒಳ್ಳೆಯದೆ ಆಗುತ್ತದೆ ನಗಿಸುವುದಂತೂ ಶ್ರೇಷ್ಠತರ ಧರ್ಮ, ಇನ್ನೊಬ್ಬರು ನಗುವನ್ನು ಸಹೃಯತೆಯಿಂದ ನೋಡುವುದಾಗಲಿ, ಕೇಳುವುದಾಗಲಿ, ಆಲಿಸುತ್ತಾಗಲಿ ಸಹಭಾಗಿಯಲ್ಲಿ ನಗುವುದು ಅತಿಶಯದ ಧರ್ಮ ಇದಕ್ಕಾಗಿಯೇ ಎನ್ನುವರು ನಗು ಪ್ರಸಂಗ ಕೇಳುವಾಗ ಕೈಚಪ್ಪಾಳೆ ತಟ್ಟಿರಿ ಎಂದು, ನಗುವನ್ನು ಎಂದರೆ ಹಾಸ್ಯ ಪ್ರಜ್ಞೆಯನ್ನೇ ನಗಿಸುವ ಎಂದರೆ ಅರಳಿಸುವ ವರವನ್ನು ಮಿಗೆ ನೀನು ಬೇಡಿಕೊಳ್ಳೊ ದೇವರಲ್ಲಿ ಎಂದಿದ್ದಾರೆ ಡಿ.ವಿ.ಜಿ ಯವರು ಮಂಕುತಿಮ್ಮನ ಪಾತ್ರ.

ನಗುವು ಸಹಜ ಧರ್ಮ, ನಗಿಸುವುದು ಪರಧರ್ಮ|
ನಗುವ ಕೇಳುವ ನಗುವುದಲೆಶಯದ ಧರ್ಮ||
ನಗುವ ನಗಿಸುವ ನಗಿಗೆ ನಗುತ ಬಾಳುವ ವರವ|
ಮಿಗೆ ನೀನು ಬೇಕೊ ಮಂಕುತಿಮ್ಮ||

ಡಿ.ವಿ.ಜಿ

ನಗುಮನವಿಲ್ಲದಿರುವಾಗ ನಗುಮನವು ಇಂದಿನ ವಿಪ್ಲವ, ವಿನಾಶ ಮತ್ತು ವ್ಯಾಕುಲಗಳು ತುಂಬಿರುವ ಜಗತ್ತಿನಲ್ಲಿ ಮನುಷ್ಯನ ಮನಸ್ಸಿಗೂ ಶರೀರಕ್ಕೂ ಬುದ್ಧಿ-ಅಹಂಕಾರ ಪಕ್ರತಿಗಳಿಗೂ ಪರಮೌಷಧ, ಜೀವನಕ್ಕೆ ಅವಶ್ಯವಾದ ಹಾಸ್ಯಯೋಗವೆಂಬ ವಿನೋದವು ನಮ್ಮ ಮುಖಸ್ನಾಯು ಮತ್ತು ನರಗಳ ಬಿಗಿಯನ್ನು ಸಡಿಲಗೊಳಿಸಿ ಸಮಾಧಾನ ಮತ್ತು ಸ್ವಸ್ಥತೆಗಳನ್ನು ಒದಗಿಸುತ್ತದೆ. ಚಿಂತನೆ ಚಿಂತೆಯಿಂದ ಬಿಗಿಯಾಗಿರುವುದು ಯಾರಿಗೂ ಸೋಭಿಸುವುದಿಲ್ಲ ನಗುತ್ತಿರುವುದು ಸುಂದರವಾಗಿರುತ್ತದೆ. ಘರ್ಷಣೆ. ನಿರಾಶೆ ಮತ್ತು ಖಿನ್ನತೆಗಳನ್ನೆಲ್ಲ ಕಳೆದು ಜೀವನದಲ್ಲಿ ಲವಲವಿಕೆ ಮತ್ತು ಅಪೇಕ್ಷೆಗಳನ್ನು ಕುದುರಿಸುತ್ತದೆ.[೪]

ನಕ್ಕು ಬಿಡು ಆಗ ಜಗತ್ತೆಲ್ಲ ನಿನ್ನೊಡನೆ ನಗುತ್ತದೆ. ಆದರೆ ನೀನು ಅತ್ತರೆ ಜಗವು ನಿನ್ನೊಡನೆ ಅಳುವುದು ಅಪರೂಪವೇ, ನೀನು ಒಂಟಿಯಾಗಿ ಅಳಬೇಕಾಗುತ್ತದೆ. ಎಂದೊಬ್ಬ ಪ್ರಜ್ಞಾವಂತ ಹೇಳಿದ್ದಾನೆ. ಆದ ಕಾರಣ ನಗುವನ್ನು ಹಬ್ಬಿಸುವುದು ಪ್ರತಿಯೊಬ್ಬನ ಕರ್ತವ್ಯವಾಗಿರುತ್ತದೆ. ಅದೊಂದು ವಿಶ್ವ ಸಂಬಂಧಿ ಭಾಷೆಯಾಗಿ ಅವಶ್ಯವಾಗಿ ಬೇಕಿರುತ್ತದೆ.[೫]

ಮಾನವನ ಇತಿಹಾಸದಷ್ಟೇ ಪ್ರಾಚೀನವಾಗಿದೆ ರೇಖೆ. ರೇಖೆ ಒಂದು ಕಲ್ಪನೆ. ಚಿತ್ರಕಾರ ರೇಖೆಯ ಮೂಲಕ ವಿವಿಧ ಅಂಶಗಳನ್ನು ಚಿತ್ರಿಸಿ ನಿಜಸ್ಥಿತಿಯ ಕಲ್ಪನೆಯನ್ನು ಉಂಟುಮಾಡುತ್ತಾನೆ. ರೇಖೆಯನ್ನು ಒಂದು ಮಾಧ್ಯಮವೆಂದು ಪರಿಗಣಿಸಿದಾಗ ಅದಕ್ಕಿರುವ ಸತ್ವ, ಮಹತ್ವಗಳು ಅರಿವಾಗುತ್ತವೆ. ನೋಡುವುದಕ್ಕೆ ತುಂಬಾ ಸಾಧಾರಣವೆನಿಸುವ ಒಂದು ರೇಖೆ ನುರಿತ ಕೈಯಲ್ಲಿ ಪರಿಣಾಮಕಾರಿ ಮಾಧ್ಯಮವಾಗುತ್ತದೆ. ಮನಸ್ಸಿನ ಸಮಸ್ತ ಕಲ್ಪನೆಗಳಿಗೆ ಮೂರ್ತ ಸ್ವರೂಪ ನೀಡಬಲ್ಲ ಅಗಾಧ ಶಕ್ತಿಯುಳ್ಳ ರೇಖೆ ವಿಶ್ವದ ಚಿತ್ರಕಲೆಯ ಜೀವಸೆಲೆ.

---

೦೪. ವಾಸುದೇವ ಕಾಣೆಮಾರ್ : ಕಲಾ ವಿಶೇಷಗಳು ; ಪುಟ ಸಂಖ್ಯೆ-೮೪

೦೫. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೦೧

ಚಿತ್ರಗಳು ಮನುಷ್ಯನ ಮಾನಸಿಕ ವಿಚಾರಗಳನ್ನು ಅಭಿವ್ಯಕ್ತಿಸುವ ಪುರಾತನ ಕಲಾವಿಧಾನ. ಬರವಣಿಗೆಯನ್ನು ಕಲಿಯುವುದಕ್ಕಿಂತಲೂ 'ಹತ್ತು ಸಹಸ್ರ ವರ್ಷಗಳಷ್ಟು ಮುಂಚೆಯೇ ಮನುಷ್ಯ ತಾನು ವಾಸಿಸುತ್ತಿದ್ದ ಗವಿಯ ಗೋಡೆಗಳ ಮೇಲೆ ಮತ್ತು ಕಲ್ಲಿನ ಮತ್ತು ಎಲುಬಿನ ಉಪಕರಣಗಳ ಮೇಲೆ ಚಿತ್ರಗಳನ್ನು ಕೆತ್ತಿದ. ೨೫.೦೦೦ ವರ್ಷಗಳಿಗಿಂತಲೂ ಹಿಂದಿನ ಅತಿ ಪ್ರಾಚೀನವಾದುದೆಂದೇ ನಂಬಲಾಗಿರುವ ಗುಹಾಚಿತ್ರಗಳು ಫ್ರಾನ್ಸಿನಲ್ಲಿ ಲಭಿಸಿವೆ. ಅದಕ್ಕಿಂತಲೂ ಕೆಲವು ಸಾವಿರ ವರ್ಷಗಳಷ್ಟು ಹಿಂದಿನವೆಂದು ನಂಬಲಾಗಿರುವ ಕೆತ್ತನೆಯ ಚಿತ್ರಗಳೂ ಲಭಿಸಿವೆ. ಬರವಣಿಗೆಯ ಕಲೆ ಮೊದಲಾದದ್ದು ಕ್ರಿ.ಪೂ. ೩೫೦೦ರಿಂದ ಈಚೆಗೆ. ಇದರ ಉಗಮವಾದದ್ದೂ ಚಿತ್ರಗಳ ಮೂಲಕವೇ. ಆದಿಮಾನವ ಚಿತ್ರಗಳಿಗೆ ಅಪಾರ ಧಾರ್ಮಿಕ ಮಹತ್ವವನ್ನು ನೀಡಿದ್ದನೆಂದು ನಾವು ಕಾಣಬಹುದಾಗಿದೆ.

ಚಿತ್ರರಚನೆಯಲ್ಲಿ ಒಂದು ಬಗೆ: ರೇಖಾಚಿತ್ರ, ರೇಖೆಗೆ ಅದರದೇ ಆದರ ಮೂಲ ಸತ್ವವಿದೆ, ಸ್ವಂತ ವ್ಯಕ್ತಿತ್ವವಿದೆ, ಸ್ವತಂತ್ರ ಅಭಿವ್ಯಕ್ತಿಯಿದೆ. ಮಧ್ಯಯುಗದಲ್ಲಿ ಪ್ರಸಿದ್ಧ ಕಲಾವಿದರು ರೇಖಾಚಿತ್ರಗಳನ್ನು ಬಿಡಿಸಿದ್ದ, ವಿಡಿದಷ್ಟೇ ಅಲ್ಲದೆ ಅವುಗಳ ವಿವಿಧ ಸಾಧ್ಯತೆಗಳ ಬಗ್ಗೆಯೂ ಚಿಂತಿಸಿದರು. ಹೀಗೆ ಸಾಧ್ಯತೆಗಳ ಅನ್ವೇಷಣೆಯ ಫಲವಾಗಿ ಬೆಳಕಿಗೆ ಬಂದಿದ್ದೇ ವಿಡಂಬನಾತ್ಮಕ ರೇಖಾಚಿತ್ರ ಅಥವಾ ವ್ಯಂಗ್ಯಚಿತ್ರ. ವ್ಯಂಗ್ಯಚಿತ್ರಗಳು ವಿಡಂಬನೆ, ರೇಖಾಚಿತ್ರ ಎರಡರ ವ್ಯಾಪ್ತಿಯನ್ನೂ ಮೀರಿದವು. ನೇರಚಿತ್ರಗಳು, ಎಲ್ಲರಿಗೂ ಕೂಡಲೇ ಅರ್ಥವಾಗುತ್ತವೆ. ಆದರೆ ವ್ಯಂಗ್ಯಚಿತ್ರಗಳು ತಮ್ಮ ರೇಖಾಚಿತ್ರದ ಚೌಕಟ್ಟಿನ ವ್ಯಾಪ್ತಿಯಿಂದ ಹೊರಬಂದ ಕೂಡಲೇ, ಕ್ಷಣಕಾಲ ಅಥವಾ ಬಹುಕಾಲ ರಂಜಿಸುತ್ತವೆ. ರೇಖಾಚಿತ್ರ ಕಣ್ಣಿಂದ ದೂರವಾದರೂ ಅದರ ಪ್ರಭಾವ ಬಹುಕಾಲ ದಾಖಲಾಗಿರುತ್ತದೆ. ವಿಶ್ವದಲ್ಲಿ ಅತ್ಯಂತ ಪ್ರಭಾವಿತ ಕಲೆಯಾಗಿರುವ ವ್ಯಂಗ್ಯಚಿತ್ರ ದೇಶ, ಭಾಷೆಗಳ ವ್ಯಾಪ್ತಿಯನ್ನು ಮೀರಿ ವೈಚಾರಿಕ ಕ್ರಾಂತಿ ಉಂಟುಮಾಡುತ್ತಿದ್ದು, ಆಯಾ ಕಾಲದ ಸಾಮಾಜಿಕ, ರಾಜಕೀಯ ಸ್ಥಿತಿಗಳನ್ನು ತಿಳಿದುಕೊಳ್ಳಲು ಒಂದು ಪ್ರಬಲ ವಿಚಾರಾತ್ಮಕತ ಮಾಧ್ಯಮವಾಗಿದೆ. ನಿಪುಣ ವ್ಯಂಗ್ಯಚಿತ್ರಕಾರ ಶಬ್ದವಂತಿಕೆಯನ್ನು ಮೀರಿ ತನ್ನ ಕಲಾವಂತಿಕೆ ಮೆರೆಯುತ್ತಾನೆ. ಸಮಕಾಲೀನ ಪ್ರಜ್ಞೆ, ಕ್ರಿಯಾಶೀಲ ವಿಡಂಬನೆ ಮತ್ತು ಸ್ಥಿತಿಪ್ರಜ್ಞತೆ ಅವನ ಅಸ್ತ್ರಗಳು.[೬]

ಕಾರ್ಟೂನ್ ಎಂಬುದು ಮೂಲ ಇಟಾಲಿಯನ್ ಪದ. ಚೌಕಳಿಗೆರೆ ಹಾಕಿದ ಕಾಗದದ ಮೇಲಿನ ಬಾಹ್ಯರೇಖಾಚಿತ್ರಕ್ಕೆ ಈ ಹೆಸರಿತ್ತು. ಯಾವ ಅಳತೆಗೆ ಬೇಕಾದರೂ ಚಿತ್ರವನ್ನು ಹಿಗ್ಗಿಸಿ ಬರೆಯುವುದಕ್ಕೆ ಈ ಕಾಗದ ಉಪಯೋಗಕ್ಕೆ ಬರುತ್ತಿತ್ತು. ಕಾರ್ಟೂನ್ ಅಥವಾ ವ್ಯಂಗ್ಯಚಿತ್ರ ಎಂದು ನಾವು ಇಂದು ಕರೆಯುತ್ತಿರುವ ಚಿತ್ರಶೈಲಿ ತುಂಬಾ ಹಿಂದೆ ಇಲ್ಲಿ ಅಥವಾ ಬೇರೆ ದೇಶಗಳಲ್ಲಿ ಇದ್ದಿಲ್ಲವಾದರೂ, ಸಾವಿರಾರು ವರ್ಷಗಳ ಹಿಂದೆಯೇ ಚಿತ್ರ ಮತ್ತು ಶಿಲ್ಪಕಲೆಯಲ್ಲಿ ಸಾಮಾಜಿಕ ವೈಚಿತ್ರ್ಯಗಳನ್ನು ಚಿತ್ರಿಸುವ ಸಂಪ್ರದಾಯ ಎಲ್ಲೆಡೆ ಇತ್ತು. ಗಂಡನನ್ನು ದಂಡಿಸುವ ಹೆಂಡತಿ, ಕತ್ತೆಯ ಕಾಲು ಹಿಡಿದಿರುವ ವಾಸುದೇವ, ಧೇನುಕಾಸುರನನ್ನು ಅಪ್ಪಳಿಸಿ ಕೊಲ್ಲಲು ಕಾಲು ಹಿಡಿದಿರುವ ಬಾಲಕೃಷ್ಣ ದೇವಸ್ಥಾನದ ಹೊರಗೋಡೆ ಮೇಲೆ ರಚಿತವಾಗಿರುವ ಕುಬ್ಜ ಮೀನು ಪಕೃತಿಗಳು

---

೦೬. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೦೧

ಅಲ್ಲದೆ ಆದಿಮಾನವನ ಗುಹೆಗಳಲ್ಲಿ ರಚಿಸಿದಂತಹ ಕೆಲವು ಚಿತ್ರಗಳು ಇನ್ನೂ ಮುಂತಾದ ಚಿತ್ರಗಳನ್ನು ಕ್ರಿ.ಶ. ೭-ಆನೇ ಶತಮಾನದ ದೇವಾಲಯಗಳಲ್ಲಿ ಕಾಣುತ್ತೇವೆ. ಸಂಸ್ಕೃತ ಮುಕ್ತಕಗಳಲ್ಲಿ, ಜನಪದ ತ್ರಿಪದಿಗಳಲ್ಲಿ, ಅಷ್ಟೇ ಏಕೆ, ವಚನ ಸಾಹಿತ್ಯ ಮತ್ತು ದಾಸರ ಪದಗಳಲ್ಲೂ ವ್ಯಂಗ್ಯಚಿತ್ರಗಳಿಗೆ ಆಕರವಾಗಬಲ್ಲ ನೂರಾರು ವಿಚಾರಗಳನ್ನು ಕಾರಣಬಹುದು. ಸಾಹಿತ್ಯದಲ್ಲಿ ಹಾಸ್ಯವನ್ನೊಂದು ರಸವಾಗಿ ಸ್ವೀಕರಿಸಿ ನಮ್ಮ ಪೂರ್ವಜರು ದೃಶ್ಯಕಲೆಗಳಲ್ಲಿ ಅದಕ್ಕೊಂದು ಮುಖ್ಯಸ್ಥಾನವನ್ನು ಕೊಟ್ಟಿಲ್ಲದೆ ಇರುವುದು ಸೋಜಿಗದ ಸಂಗತಿಯೇ ಆಗಿದೆ. ಸಾಮಾಜಿಕ ವ್ಯಂಗ್ಯಚಿತ್ರಗಳಿಗೂ ನಮ್ಮ ಗತಕಾಲದ ಸಮಾಜ ಮತ್ತು ಕಲಾಪರಂಪರೆ ಪುಷ್ಟಿಕೊಡಲಿಲ್ಲ.

ಯಾವುದೇ ದೇಶ ಮತ್ತು ಕಾಲಮಾನದಲ್ಲಿ ವ್ಯಂಗ್ಯ ಚಿತ್ರಕಾರರು ವಿಶೇಷ ಜೈವಿಕ ಬೆಳವಣಿಗೆ. ಪತ್ರಿಕೆಗಳ ಮೂಲಕವೇ ಬೆಳಕಿಗೆ ಬಂದರೂ ಪತ್ರಕರ್ತನ ವ್ಯಾಪ್ತಿಯನ್ನು ಮೀರಿರುವುದು ಇವನ ವಿಶೇಷತೆ. ಒಬ್ಬ ಪತ್ರಕರ್ತನನ್ನು ಮೀರಿದ ವಿಶೇಷ ಸತ್ವಗಳು ವ್ಯಂಗ್ಯಚಿತ್ರಕಾರನಲ್ಲಿ ಇರಬೇಕಾಗಿರುತ್ತದೆ. ಸುದ್ದಿಯ ವಾಸನೆ ಹಿಡಿಯುವ ಮೂಗು, ಬರಹ ಬರೆಯುವ ಚಿಂತನೆ, ನಿರ್ಣಾಯಕ ಶಕ್ತಿ, ಹಾಸ್ಯ ಪ್ರಜ್ಞೆ ವೀಡಂಬನಪ್ರಜ್ಞೆ ನ್ಯಾಯದ ಪರ ನಿಲ್ಲುವ ಛಲ ಜೊತೆಗೆ ಇವೆಲ್ಲವುಗಳನ್ನು ಯಶಸ್ವಿಯಾಗಿ ಚಿತ್ರದಲ್ಲಿ ಮೂಡಿಸಬಲ್ಲ ಕಲಾವಂತಿಕೆ. ಇಷ್ಟೆಲ್ಲ ಸದ್ಗುಣ ಹೊಂದಿರುವವರು ಸಿಕ್ಕವುದು ಸುಲಭವೇ? ಹೀಗಾಗಿಯೇ ನಾವು ಕಷ್ಟಪಟ್ಟು ಹುಡುಕಿದರೆ ಮಾತ್ರ ಕಣ್ಣಿಗೆ ಬೀಳುವವರು ಬೆರಳೆಣಿಕೆಯಷ್ಟು ಮಂದಿ ಮಾತ್ರವಷ್ಟೇ.

ಬಹಳ ಹಿಂದೆ ಕಲಾವಿದರು ಯಾವುದಾದರೂ ಚಿತ್ರವನ್ನು ಬಿಡಿಸುವ ಮುನ್ನ ಸ್ಥೂಲವಾಗಿ ಸ್ಕೆಚ್ ಮಾಡಿಕೊಳ್ಳುತ್ತಿದ್ದರು. ಇವನ್ನು ಅವರು ಕಾರ್ಟೂನುಗಳೆಂದೇ ಕರೆದರು. ಹಾಗೆಯೇ ನೇಕಾರರಿಗೆ ಮಾಡಿಕೊಟ್ಟ ಸುಂದರ ಮಾದರಿ ಕಾಗದಗಳನ್ನೂ ಕಾರ್ಟೂನ್ ಎಂದೇ ಕರೆಯಲಾಗುತ್ತಿತ್ತು. ಕಾಲ ಬದಲಾದಂತೆ ಕಾರ್ಟೂನಿನ ಅರ್ಥನಿಷ್ಪತ್ತಿ ಮತ್ತು ವ್ಯಾಪ್ತಿ ಬದಲಾಗಿದ್ದರ ಪರಿಣಾಮವಾಗಿ ಇಂದಿನ 'ಕಾರ್ಟೂನ್' ಆಗಿದೆ. ಇಂದಿನ ಪತ್ರಿಕೆಗಳಲ್ಲಿ ಕಾರ್ಟೂನುಗಳದ್ದು ಪ್ರಮುಖ ಪಾತ್ರ. ಹತ್ತಾರು ಪದಗಳನ್ನು ಅಥವಾ ಪ್ಯಾರಾಗಳನ್ನು ಯಶಸ್ವಿಯಾಗಿ ಪ್ರತನಿಧಿಸಬಲ್ಲ ಶಕ್ತಿ ಕಾರ್ಟೂನಿಗಿದೆ. ಹೀಗಾಗಿ ಇಂದು ವ್ಯಂಗ್ಯಚಿತ್ರಗಳಿಲ್ಲದ ಪತ್ರಿಕೆಗಳೆ ಇಲ್ಲವೆಂದು ಧಾರಾಳವಾಗಿ ಹೇಳಬಹುದು. ರಾಜಕೀಯ ವಿಡಂಬನೆ, ಸಾಮಾಜಿಕ ವಿಡಂಬನೆ, ನಿರ್ದಿಷ್ಟ ವಿಷಯದ ಬಗ್ಗೆ ವಿಶೇಷ ವಿಡಂಬನೆ, ಲಘುಹಾಸ್ಯ ಮುಂತಾಗಿ ಬಹು ವಿಧದಲ್ಲಿ ಬಹುಮುಖವಾಗಿ ಬೆಳೆದಿರುವ ಕೂರ್ಟೂನ್‌ಗಳ ಕಲೆ ಮಕ್ಕಳಿಗೂ ತುಂಬಾ ಇಷ್ಟ. ಕಾರಣ ಮಕ್ಕಳಿಗೆಂದೇ ವಿಶೇಷವಾಗಿ ಪ್ರಕಟವಾದ ಚಿತ್ರಸರಣಿ ರಂಜಕವೂ ಬೋಧಕವೂ ಆಗಿರುವ ಸ್ಟ್ರಿಪ್ ಕಾರ್ಟೂನ್ (ಚಿತ್ರಸರಣಿ) ಇಂದು ದೊಡ್ಡ ದೊಡ್ಡ ಸಂಸ್ಥೆಗಳಿಂದ ತಯಾರಿಸಲ್ಪಟ್ಟು, ಇಡೀ ಪ್ರಪಂಚಕ್ಕೆ ಹಂಚಿಕೆಯಾಗುತ್ತಿವೆ. ಈಚೆಗೆ ದೇಶೀಯ ಪ್ರಯತ್ನಗಳೂ ಈ ನಿಟ್ಟಿನಲ್ಲಿ ನಡೆಯುತ್ತಿವೆ. ವಿದ್ಯಾವಂತ ಜನಾಂಗದಲ್ಲಿ ಸಾಮಾಜಿಕ, ನೈತಿಕ, ರಾಜಕೀಯ ಪ್ರಜ್ಞೆಗಳು ಬಲಗೊಂಡು ಯಾವುದೇ ಶೋಷಣೆಯ ವಿರುದ್ಧ ಸಿಡಿದು ನಿಲ್ಲುವಂಥ ಶಕ್ತಿ ಪ್ರವಹಿಸುವ ಗುಪ್ತಗಾಮಿನಿಯಾಗಿ ಹರಿಯುತ್ತಿವೆ. ಈ ನಮ್ಮ ವ್ಯಂಗ್ಯಚಿತ್ರಗಳು![೭]

---

೦೭. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೦೪

ವ್ಯಂಗ್ಯಚಿತ್ರಪರಂಪರೆ ಪಾಶ್ಚಾತ್ಯದೇಶದಲ್ಲಿ ಹುಟ್ಟಿ ಬೆಳೆದದ್ದೂ ಪ್ರಜಾತಾಂತ್ರಿಕ ರಾಜಕಾರಣದ ಮತ್ತು ಮಾನವ ಸಮಾನತ್ವದ ಆಧುನಿಕ ತತ್ತ್ವಚಿಂತನೆ ಮತ್ತು ಪ್ರಚಾರದ ಫಲವಾಗಿಯೇ. ಪಾಶ್ಚಾತ್ಯರಾಷ್ಟ್ರಗಳಲ್ಲಿ ಮೂಡಿಬಂದ ವೈಚಾರಿಕ ಕ್ರಾಂತಿ 'ರಿನೈಸಾನ್ಸ್'ನ ಅನಂತರವೇ ಸಾಹಿತ್ಯ ಕಲೆಗಳು ಬಂಧ ವಿಮೋಚನೆ ಪಡೆದು ವ್ಯಂಗ್ಯಚಿತ್ರಗಳ ಬೆಳೆಪ್ರಾರಂಭವಾದದ್ದು. ಮೊಟ್ಟಮೊದಲಗೆ ಯೂರೋಪ್‌ನಲ್ಲಿ ಕಾರ್ಟೂನ್ ಪ್ರಕಟವಾಯಿತು.

ವಿಶ್ವದ ಪ್ರಥಮ ಕಾರ್ಟೂನನ್ನು ಯಾರು ಬರೆದರೆಂಬ ಬಗ್ಗೆಯಾಗಲೀ ಅದು ಯಾವುದೆಂಬ ಬಗ್ಗೆಯಾಗಲೀ ಯಾವುದೇ ದಾಖಲೆ ಇಲ್ಲ. ಈಗ ದೊರೆತಿರುವ ಮಾಹಿತಿಯ ಪ್ರಕಾರ ೧೮೭೬ರಲ್ಲಿ ಪ್ರಕಟವಾದದ್ದೇ ಪ್ರಥಮ ಕಾರ್ಟೂನ್ ಎಂದು ನಂಬಲಾಗಿದೆ.

ನಮಗಿಂತಲೂ ಬಹುಮೊದಲು ಅಮೆರಿಕಾ, ಇಂಗ್ಲೆಂಡ್ ಮತ್ತು ಫ್ರಾನ್ಸ್ ದೇಶಗಳಲ್ಲಿ ಈ ಕಲೆ ಬೆಳೆಯಿತು. ಹೀಗಾಗಿ ಈ ಪರಂಪರೆಯ ಮೂಲಪುರುಷರನ್ನು ನಾವು ಅಲ್ಲಿಂದಲೇ ಗುರುತಿಸಬೇಕಾದ್ದು ಅನಿವಾರ್ಯವಾಗಿದೆ. ಫ್ರಾನ್ಸ್ ಅತ್ಯಂತ ಪ್ರಬಲ ವ್ಯಂಗ್ಯಚಿತ್ರಕಾರರನ್ನು ಸೃಷ್ಟಿಸಿತು. ಆ ಕಾಲದ ಅಂದರೆ ೧೯ನೇ ಶತಮಾನದ ಒಬ್ಬ ಮಹಾನ್ ಇತಿಹಾಸಕಾರನೆಂದೇ ಗುರುತಿಸಲ್ಪಡುತ್ತಿರುವ ಡೌಮಿಯರ್, ಅಸಮಾನತೆ, ಕಾನೂನಿನ ಅಸಮರ್ಪಕತೆ ಮುಂತಾಗಿ ತನ್ನ ವಿಷಯಗಳ ಬಗ್ಗೆ ತುಂಬಾ ಪರಿಣಾಮ ಬೀರಿದ ನೂರಾರು ಚಿತ್ರಗಳನ್ನು ಅವನು ರಚಿಸಿ ಪ್ರಸಿದ್ಧನಾದ. ಪಾಲ್ ಪಾವರ್ನಿ, ಪಾಲ್ ಗುಶ್ಚೋವ್, ಟ್ರಾವಿಸ್ ಕಾರ್ನಾಡಿಜ್ ಮುಂತಾದ ಹಲವಾರು ತೀಕ್ಷ್ಣ ವಿಡಂಬನಕಾರರು ಫ್ರಾನ್ಸ್‌ನಲ್ಲಿ ಉದಯಿಸಿದರು. ಲಾ ಕ್ಯಾರಿಕೇಚರ್ ಮತ್ತು ಲೀ ಚ್ಯಾರಿವಾರಿ ಮೂಲಕ ಬೆಳಕಿಗೆ ಬಂದ ಫಿಲಿಪಾನ್ ತನ್ನ ಕೊನೆಯುಸಿರಿನವರೆಗೂ ಕೆಳವರ್ಗದವರ ನೋವು ನಲಿವನ್ನು ಯಶಸ್ವಿಯಾಗಿ ಬಿಂಬಿಸಿದ್ದ ಅನಂತರ ಬಂದ ಪಾಲ್ ಗ್ಯಾವರಿನ್ ೧೯೦೩ರಲ್ಲಿ ತನ್ನದೇ ಆದ ಪತ್ರಿಕೆ ಪ್ರಾರಂಭಿಸಿ ಪ್ರಸಿದ್ಧನಾದ.

ಸಮಾಜದ ವಿಮರ್ಶೆಯಲ್ಲಿ ರಾಜಕೀಯ ವ್ಯಂಗ್ಯಚಿತ್ರಗಳದ್ದು ಮಹತ್ತರ ಪಾತ್ರ. ಬಹುತೇಕ ರಾಷ್ಟ್ರಗಳಲ್ಲಿ ಅನೇಕ ಸಂದರ್ಭಗಳಲ್ಲಿ ಸರ್ಕಾರದ ಬಗ್ಗೆ ರಚನಾತ್ಮಕ ವಿಮರ್ಶೆ ಹೊರಹೊಮ್ಮುವುದು ಪತ್ರಿಕೆಯ ಅಗ್ರಲೇಖನಗಳಿಂದ ಅಲ್ಲ, ವ್ಯಂಗ್ಯಚಿತ್ರಗಳಿಂದ ಎನ್ನುವುದು ಅತಿಶಯೋಕ್ತಿಯಲ್ಲ. ಅಮೇರಿಕಾದ ಪ್ರಸಿಧ ವ್ಯಂಗ್ಯಚಿತ್ರಕಾರರುಗಳಾದ ಆಲಿಫಾಂಟ್ ಆ್ಯಥ್, ಮೆಕೆನೆಲ್ಲಿ ಮತ್ತು ಬ್ರಿಟನ್ನಿನ ಡೆವಿಡ್ ಲೋ ಮುಂತಾದವರ ಚಿತ್ರಗಳಿಗೆ ಈ ಮಾತು ಚೆನ್ನಾಗಿ ಅನ್ವಯಿಸುತ್ತದೆ. ವಿಶ್ವಯುದ್ಧದ ಸಂದರ್ಭದಲ್ಲಿ ಹಿಟ್ಲರ್ ಮತ್ತು ಮುಸೋಲಿನಿ ಅವರಂತ ಸರ್ವಾಧಿಕಾರಿಗಳೂ ಲೋ ಅವರ ವ್ಯಂಗ್ಯಚಿತ್ರಗಳಿಗೆ ಬೆಚ್ಚುತ್ತಿದ್ದರಂತೆ. ಆಧುನಿಕ ವ್ಯಂಗ್ಯಚಿತ್ರಕಲೆಯ ಸಂಶೋಧಕರು ಎಂಬ ಕೀರ್ತಿಗೆ ಪಾತ್ರರಾಗಿರುವ ಜಿಲ್‌ರೇ ಮತ್ತು ರೌಲ್ಯಾಂಡ್‌ಸನ್ ೧೯ನೇ ಶತಮಾನದ ಆದಿಭಾಗದಲ್ಲಿ ಮಹತ್ವಪೂರ್ಣ ಕೆಲಸ ಮಾಡಿದ್ದಾರೆ. ಬ್ಲಾಂಡಿ ಚಿತ್ರಕಾರ ಚಿಕ್ ಯಂಗ್ ಮತ್ತು ಮಿಕ್ಕಿ ಮೌಸ ಜನಕ ವಾಲ್ಟ್‌ಡಿಸ್ನಿಸೇವೆಗೆ ಇಡೀ ಜಗತ್ತು ಆನಂದಿಸಿದೆ.

೧೯ನೇ ಶತಮಾನದ ಮಧ್ಯಭಾಗದಲ್ಲಿ ಬ್ರಿಟಿಷ್ ಪತ್ರಿಕೆಗಳಿಂದ ಸ್ಫೂರ್ತಿ ಪಡೆದುಕೊಂಡ ಭಾರತದ ಪತ್ರಿಕೆಗಳಲ್ಲಿ ವ್ಯಂಗ್ಯಚಿತ್ರಗಳೂ ಕಾಣಿಸಿಕೊಂಡವು. ಸಿಪಾಯ್ ಎಂಬ ಬ್ರಿಟಿಷ್ ವ್ಯಕ್ತಿ ೧೮೫೯ರಲ್ಲಿ ಸ್ಥಾಪಿಸಿದ ಇಂಡಿಯನ್ ಪಂಚ್ ಮಾಸಪತ್ರಿಕೆಯಲ್ಲಿ ಭಾರತದ ಮೊಟ್ಟಮೊದಲನೆಯ ವ್ಯಂಗ್ಯಚಿತ್ರ ಪ್ರಕಟವಾಯಿತು.

ಇದನ್ನು ಬಿಟ್ಟರೆ ಭಾರತೀಯ ಭಾಷೆಗಲಲ್ಲಿ ಮೊದಲ ಪತ್ರಿಕಾ ಪ್ರಕಟಣೆ ಸಿಗುವುದು ಬಂಗಾಲಿ ಭಾಷೆಯಲ್ಲಿ ಬಸಂತ್ ಮತ್ತು ಪಂಜಾನಂ ಮಾಸಪತ್ರಿಕೆಗಳು ಅಲ್ಲಿ ಪ್ರಕಟವಾದವು. ಪ್ರಾಣನಾಥ ದತ್ತ ಮತ್ತು ಗಿರೀಂದ್ರನಾಥ ದತ್ತ ಇದರ ಸಂಪಾದಕರಾಗಿದ್ದರು. ವ್ಯಂಗ್ಯಚಿತ್ರ ಪ್ರಕಟಣೆಗೆ ಸಂಬಂಧಿಸಿದಂತೆ ಪಂಚ್ ಪತ್ರಿಕೆಯ ಪ್ರಭಾವ ಪ್ರಬಲವಾಗಿತ್ತು. ಆದ್ದರಿಂದಲೇ ಲಕ್ನೋ ಪಂಚ್ ಮತ್ತು ಹಿಂದಿ ಪಂಚ್ ಪ್ರಸಿದ್ಧವಾಗಿದ್ದವು. ಅವನೀಂದ್ರನಾಥ ಠಾಕೂರರ ಅಣ್ಣ ಗಗನೀಂದ್ರನಾಥ ಠಾಕೂರ್ ಆ ಕಾಲದ ಪ್ರಸಿದ್ಧ ವ್ಯಂಗ್ಯ ಚಿತ್ರಕಾರರಾಗಿದ್ದರು.[೮]

ಭಾರತೀಯ ಪತ್ರಿಕೆಗಳಿಗೆ ಹಂತಹಂತವಾಗಿ ಧೈರ್ಯ ಬಂದ ಪರಿಣಾಮ, ಆಡಳಿತದಲ್ಲಾಗುತ್ತಿದ್ದ ಅನ್ಯಾಯ ಅಕ್ರಮಗಳನ್ನು ಪ್ರಕಟಿಸಲಾರಂಭಿಸಿದರು. ಸರ್ವಾಧಿಕಾರಿ ಧೋರಣೆಯನ್ನು ಎದುರಿಸಲು ವ್ಯಂಗ್ಯಚಿತ್ರಕಾರರು ಹಲವಾರು ಸಂಕೇತಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡರು. ಭಾರತವನ್ನು ದಾರಿದ್ರ್ಯದಿಂದ ಕಂಗೆಟ್ಟಿರುವ ಭಾರತ ಮಾತೆಯನ್ನಾಗಿ ಚಿತ್ರಿಸಲಾಗುತ್ತಿತ್ತು. ನೈಜವ್ಯಕ್ತಿಗಳನ್ನು ಬಳಸಿಕೊಳ್ಳುವಷ್ಟು ಧೈರ್ಯ ಆಗಿನ್ನೂ ಬಂದಿರಲಿಲ್ಲ.

ಜನತೆಯ ಸಂಘಟನೆ ಬಲವಾದಂತೆ ಪತ್ರಿಕೆಗಳಿಗೂ ಧೈರ್ಯ ಬಂತು. ವ್ಯಂಗ್ಯಚಿತ್ರಗಳಲ್ಲಿ ಇನ್ನಷ್ಟು ಹುಮ್ಮಸ್ಸು ಕಾಣಿಸಿತು. ಭಾರತಮಾತೆ ಈಗ ದಾಸಿಯಾಗಿರಲಿಲ್ಲ. ವಿಕ್ಟೋರಿಯಾ ರಾಣಿಯೂ ಸೇರಿದಂತೆ ಇಲ್ಲಿನ ವೈಸ್‌ರಾಯ್‌ಗಳಾಗಿದ್ದ ಜಾನ್ ಬುಲ್, ಲಾರ್ಡ್ ಇರ್ವಿನ್, ಲಾರ್ಡ್ ವೆಲ್ಲಿಂಗ್ಟನ್, ಲಾರ್ಡ್ ಲಿನ್‌ಲಿತ್‌ಗೋ ಮುಂತಾದವರು. ಮತ್ತವರ ದರ್ಬಾರುಗಳೆಲ್ಲ ರಾಷ್ಟ್ರದ ವ್ಯಂಗ್ಯಚಿತ್ರಕಾರರ ಕೈಗೆ ಸಿಕ್ಕಿ ನೂರಾರು ಚಿತ್ರಗಳು ಪರಿಣಾಮಕಾರಿಯಾಗಿ ಮೂಡಿಬಂದವು.

ವಿಶ್ವದ ಇತರ ದೇಶಗಳಿಗೆ ಹೋಲಿಸಿದರೆ ಭಾರತದ ವ್ಯಂಗ್ಯಚಿತ್ರಕಾರರು ನಿಜಕ್ಕೂ ಸುಯೋಗಿಗಳು. ನಮ್ಮ ದೇಶದಲ್ಲಿರುವಷ್ಟು ವ್ಯಕ್ತಿ ವೈವಿಧ್ಯ, ಸ್ಥಳ ವೈವಿಧ್ಯ, ಪಾತ್ರ ವೈವಿಧ್ಯ ಬಹುಶಃ ಬೇರೆಲ್ಲೂ ಸಿಕ್ಕಲಾರದು. ಸ್ವಾತಂತ್ರ್ಯ ಸಂಗ್ರಾಮದ ಅವಧಿಯಲ್ಲಿ ದುಡಿದ ರಾಷ್ಟ್ರನಾಯಕರು ಒಬ್ಬೊಬ್ಬರದೂ ಒಂದೊಂದು ವೈಶಿಷ್ಟ್ಯ. ವ್ಯಂಗ್ಯ ಚಿತ್ರಕಾರರಿಗೆ ಸುಗ್ಗಿಯಾಗಿ ಪರಿಣಾಮ ಬೀರಿತು.

ಪ್ರಾರಂಭದ ದಿನಗಳಲ್ಲಿ ನಮ್ಮ ಕಲಾವಿದರು ಪೌರಾಣಿಕ ಪಾತ್ರಗಳನ್ನಾಧರಿಸಿ ಹೆಚ್ಚು ಹೆಚ್ಚು ಚಿತ್ರ ಬರೆದರು. ಉದಾಹರಣೆಗೆ ರಾವಣ, ಹನುಮಂತ, ಕೃಷ್ಣ ಮುಂತಾದ ಪಾತ್ರಗಳ ಮೂಲಕ ಚಿತ್ರಿಸಿದ ರಾಜಕೀಯ, ಸಾಮಾಜಿಕ ಚಿತ್ರಗಳು ಬಹುಬೇಗ ಜನರಿಗೆ ತಲುಪಿದವು.

ಸ್ವಾತಂತ್ರ್ಯಪೂರ್ವದಲ್ಲಿ ಆಡಳಿತಶಾಹಿಯನ್ನು ತಮ್ಮ ವ್ಯಂಗ್ಯಚಿತ್ರಗಳ ಮೂಲಕ ತರಾಟೆಗೆ ತೆಗೆದುಕೊಳ್ಳುತ್ತಿದ್ದ ಶಂಕರ್‌ಪಿಳ್ಳೈ ಮುಂದೆ ಇದೆ ಸಂದೇಶವನ್ನೇ ಪ್ರಮುಖ ಉದ್ದೇಶವಾಗಿಟ್ಟುಕೊಂಡು 'ಶಂಕರ್ಸ್

೦೮. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೦೭

ವೀಕ್ಲಿ' ಪ್ರಾರಂಭಿಸಿ ೧೯೭೫ರವರೆಗೂ ನಡೆಸಿಕೊಂಡು ಬಂದರು. ಅವರ ರಾಜಕೀಯ ವಿಡಂಬನೆ ಇಡೀ ಭಾರತದ ಜನತೆಯ ಅನಿಸಿಕೆಯನ್ನೇ ಅಭಿವ್ಯಕ್ತಿಸುತ್ತಿತ್ತು. ಎಂಥೆಂಥಾ ಕ್ಲಿಷ್ಟ ಪರಿಸ್ಥಿತಿಯನ್ನೂ ನಿಭಾಯಿಸಿಕೊಂಡು ಬಂದ ಶಂಕರ್ ತುರ್ತುಪರಿಸ್ಥಿತಿಯ ಸಮಯದಲ್ಲಿ ಬಹುಶಃ ಅದನ್ನು ಮುಚ್ಚಿಬಿಟ್ಟರು. ರಾಜಕೀಯ ಘಟನೆಗಳ ಅಡಿಪಾಯದ ಮೇಲೆ ಭಾರತದಲ್ಲಿ ವ್ಯಂಗ್ಯಚಿತ್ರಕಲೆ ಅರಳಿತು. ರಾಜಕಾರಣಿ ಮತ್ತು ರಾಜಕಾರಣವನ್ನಾಧರಿಸಿದ ವ್ಯಂಗ್ಯಚಿತ್ರಗಳನ್ನು ಜನ ನಿರೀಕ್ಷಿಸುವಂತಾಯಿತು. ಇವುಗಳನ್ನು ನೋಡಿದ ಜನ ಬಿದ್ದೂ ಬಿದ್ದೂ ನಕ್ಕರು, ನಗುತ್ತಿದ್ದಾರೆ. ಅಷ್ಟರ ಮಟ್ಟಿಗೆ ರಾಜಕಾರಣದಿಂದ ಉಪಕಾರವೇ ನಮ್ಮ ವ್ಯಂಗ್ಯ ಚಿತ್ರ ಕಲಾವಿದರಿಗೆ ಆಗಿದೆ.

ಹಿಂದೆಂದೂ ಕಾಣದಂಥರ ಬೆಳವಣಿಗೆ ಕಳೆದ ೬೦ ವರ್ಷಗಳಲ್ಲಿ ಭಾರತವೂ ಸೇರಿದಂತೆ ಏಷ್ಯಾದ ರಾಷ್ಟ್ರಗಳಲ್ಲಾಗಿದೆ. ಪ್ರತಿಯೊಂದು ಪತ್ರಿಕೆಯೂ ಕಡ್ಡಾಯವಾಗಿ ವ್ಯಂಗ್ಯಚಿತ್ರ ಪ್ರಕಟಿಸುವುದು ಸಾಮಾನ್ಯವಾಗಿದೆ. ಬಹುತೇಕ ಎಲ್ಲ ವ್ಯಂಗ್ಯ ಚಿತ್ರಗಳೂ ಯಾವುದೇ ಘಟನೆಯಾದರೂ ಸೂಪರ್‌ಮ್ಯಾನ್, ಸ್ಪೈಡರ್‌ಮ್ಯಾನ್ ಇತ್ಯಾದಿ. ದೇಶೀಯ ಸಾಹಸಿಗಳು ಸಿಗುತ್ತಿಲ್ಲ. ಕಂಪ್ಯೂಟರ್ ಆಧರಿತ ಚಿತ್ರಮಾಲೆಗಳ ಸರಣಿ ಇದೀಗ ಕ್ರಾಂತಿಕಾರಕವಾಗಿ ಆರಂಭವಾಗಿದೆ. ಹೊಸಪೀಳಿಗೆಯ ನೂರಾರು ಜನ ಇದರಲ್ಲಿ ತರಬೇತಿ ಪಡೆದುಕೊಳ್ಳುತ್ತಿದ್ದಾರೆ. ಇವರಲ್ಲಿ ಗಟ್ಟಿ ಎಷ್ಟು, ಜೊಳ್ಳು ಎಷ್ಟು ಎಂಬುದನ್ನು ಕಾಲವೇ ನಿರ್ಧರಿಸಬೇಕಾಗಿದೆ. ವ್ಯಂಗ್ಯ ಚಿತ್ರಕಾರರ ಅಂಕು-ಡೊಂಕು ಸೇವೆಗೆ ಬೆಲೆ. ಕಹಿ ಮಾತ್ರೆಯನ್ನು ಸಿಹಿ ಲೇಪನದೊಡನೆ ನುಂಗಿಸುವವರು ಗೆರೆಯ ಗೇಯಕಾರರು, ಸಮಾಜ ಚಿಂತಕರು. ಜೀವನಾನುಭವ ಹೆಚ್ಚಾದಷ್ಟೂ ಇವರಿಗೆ ಚೆಲ್ಲಾಟ. ಈ ರೇಖಾ ವಿಹಾರದಲ್ಲೆ ವಿನೋದ, ವ್ಯಂಗ್ಯ ಪ್ರಚೋದನೆ, ಎಚ್ಚರಿಕೆ, ಪ್ರಜ್ಞಾಪ್ರಸಾರ, ಪ್ರಚಾರ. ಇದೇ ಅವರ ಸೇವೆ ಎಂದು ಬರೆಯುತ್ತಾರೆ ಜಯಶೀಲರಾವ್.[೨೯]

ವ್ಯಂಗ್ಯಚಿತ್ರಕಾರನ ಸಾಧನೆಗೆ ಎರಡು ವಿಷಯ ಬಹು ಮುಖ್ಯ. ಜೀವನದ ನಾನಾ ಘಟನೆ, ಪರಿಸರದಿಂದ ವ್ಯವಹಾರಗಳನ್ನು ಬಣ್ಣದ ಕನ್ನಡಕದಿಂದ ನೋಡುವಂತೆ ವ್ಯಂಗ್ಯ ದೃಷ್ಟಿಯಿಂದಲೇ ಕಾಣುವುದನ್ನು ಅಭ್ಯಸಿಸುವುದು ಮತ್ತು ಉದ್ದುದ್ದ ವಾಕ್ಯಗಳ ವಿವರಣೆಯ ಅವಶ್ಯಕತೆ ಇಲ್ಲದ ರೀತಿಯಲ್ಲಿ ಸಾಧ್ಯವಿದ್ದಷ್ಟೂ ಚಿತ್ರದಿಂದಲೇ ಹಾಸ್ಯ ಪ್ರಚೋದಿಸುವಂತಹ ರೇಖಾಕೌಶಲವನ್ನು ಸಾಧಿಸುವುದು. ಒಬ್ಬ ಉನ್ನತಮಟ್ಟದ ವ್ಯಂಗ್ಯಚಿತ್ರಕಾರನ ಅಭ್ಯುದಯಕ್ಕೆ ಇದೇ ತಳಹದಿ ಎಂದು ಬರೆಯುತ್ತಾರೆ ಎಂ.ಟಿ.ವಿ. ಆಚಾರ್ಯರವರು.

ಉತ್ತಮ ಕಾವ್ಯದಲ್ಲಿ ಧ್ವನಿಗೆ, ಪ್ರತಿಮೆಗೆ ಪ್ರಾಧಾನ್ಯ. ವಾಚ್ಯಾರ್ಥದಲ್ಲಿ ಹೇಳುವುದನ್ನು ಸೂಚ್ಯಾರ್ಥದಲ್ಲಿ ಹೇಳುವುದು ಪರಿಣತ ಮಾರ್ಗ, ಪರಿಣಾಮಕಾರಿ ಮಾರ್ಗ ಕೂಡ. ವ್ಯಂಗ್ಯ ಚಿತ್ರದಲ್ಲೂ ಧ್ವನಿಗೆ ಪ್ರಾಧಾನ್ಯವಿರುವ ಕಾರಣ ಪರಿಣಾಮದಲ್ಲಿ ಹೆಚ್ಚು ಶಕ್ತಿಶಾಲಿ ಎನಿಸಿದೆ. ಇದು ಓರೆಗೆರೆಗಳ ಕಾವ್ಯ. ಕಾವ್ಯದಲ್ಲಿನ ಧ್ವನಿ ಅಥವಾ ಪ್ರತಿಮೆ ಪಂಡಿತರಿಗೆ ನಿಶ್ಚಿತಪ್ರಜ್ಞೆಯವರಿಗೆ ಮಾತ್ರ ಅವಗತವಾಗುವಂತಿದ್ದರೆ, ವ್ಯಂಗ್ಯಚಿತ್ರ ಧ್ವನಿಯ ಸಾಮರ್ಥ್ಯವನ್ನು ಹೊಂದಿದ್ದರೂ ಮನಸ್ಸನ್ನು ಚುಚ್ಚಿತಿಳಿಸಬೇಕಾದದ್ದನ್ನು ಮುಟ್ಟಿಸುವಲ್ಲಿ ಹೆಚ್ಚು ಪ್ರಸಾರಗುಣವನ್ನು ಪಡೆದಿರುವುದು. ಇದೇ ಇದರ ಮಹಿಮೆ. ಬನ್ನಂಜೆ ರಾಮಾಚಾರ್ಯರವರು ಸಾವಿರ ಅಕ್ಷರಗಳು ಮಾಡಲಾರದ್ದನ್ನು ವ್ಯಂಗ್ಯ ಚಿತ್ರಕಾರನ ಹತ್ತು ಗೆರೆಗಳು ಮಾಡಬಲ್ಲವು ಎನ್ನುತ್ತಾರೆ.[೩೦]

---

೨೯. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೦೫

೩೦. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೦೪

ವ್ಯಂಗ್ಯಚಿತ್ರಗಳು ಹೇಗೆ ರಾಜಕೀಯ ಮತ್ತು ಸಾಮಾಜಿಕ ವ್ಯಾಖ್ಯಾನಗಳೋ ಹಾಗೆಯೇ ಅವು ಶಕ್ತಿಯುತವಾದ ಬದಲಾವಣೆಯ ಆಯುಧಗಳು. ಅವು ದೃಶ್ಯವಾಗಿ ಇರುವುದರಿಂದ ಸಾಹಿತ್ಯಕ್ಕಿಂತಲೂ ವೇಗವಾಗಿ ಸಾಮಾಜಿಕ ಪ್ರಭಾವ ಬೀರುತ್ತವೆ. ಪೊಳ್ಳು ನಂಬಿಕೆಗಳನ್ನೂ ಪರಂಪರೆಗಳನ್ನೂ ಆಷಾಢಭೂತಿ ನಟನೆಗಳನ್ನೂ ಬುಡಸಹಿತ ಅಲುಗಿಸುವ ಶಕ್ತಿ ವ್ಯಂಗ್ಯಚಿತ್ರಗಳಿಗಿದೆ. ಮಾನವನ ಆಷಾಢಭೂತಿತನವನ್ನು ಎಲ್ಲ ಜೀವನಕ್ಷೇತ್ರಗಳಲ್ಲಿಯೂ ಬೆಳಕಿಗೆ ಒಡ್ಡಿ ಜೊಳ್ಳನ್ನು ಗಟ್ಟಿ ಕಾಳಿನಿಂದ ತೋರಿಸುವ ಮೂಲಕ ವ್ಯಂಗ್ಯಚಿತ್ರಕಾರ ಬಹುಮುಖ್ಯವಾದ ಕೆಲಸ ಮಾಡುತ್ತಾನೆ. ಆದರೆ, ಅವನು ಸ್ವಾತಂತ್ರ್ಯದ ಪರಿಸರದಲ್ಲಿ ಮಾತ್ರ ಅರ್ಥವುಳ್ಳ ಕೆಲಸ ಮಾಡಬಲ್ಲ ನಿರಂಕುಶ ಅಧಿಕಾರಕ್ಕೆ ಅವರ ಕಲೆ ವೈರಿ; ನಿರಂಕುಶತೆ ಅವರಿಗೆ ವೈರಿ. ಪಾ.ವೆಂ. ಆಚಾರ್ಯರವರು ಇದು ಬಹುಮುಖ್ಯವಾದ ಸಂಗತಿ ಎಂದು ಹೇಳುತ್ತಾರೆ.

ಕೃಷ್ಣಾನಂದ ಕಾಮತ್‌ರವರು ವ್ಯಂಗ್ಯಚಿತ್ರಕಾರನು ಧೀಮಂತನಾಗಿರಬೇಕು ಹೇಗೋ ಹಾಗೆ ಧೈರ್ಯವಂತನೂ ಆಗಿರಬೇಕು. ಅಧಿಕಾರದಲ್ಲಿ ಮೆರೆಯುವ ರಾಜಕಾರಣಿಗಳಿಗೆ, ಜನಾಭಿಪ್ರಾಯ ನಿಯಂತ್ರಿಸುವ ನಾಯಕರಿಗೆ, ಸರಕಾರಿ ಅಧಿಕಾರಿಗಳಿಗೆ ಧರ್ಮಾಧಿಕಾರಿಗಳಿಗೆ ಮಣಿಯದೆ ತನಗೆ ಸರಿ ಕಂಡದ್ದನ್ನು ಚಿತ್ರಗಳಲ್ಲಿ ರೂಪಿಸುವ ಕೆಚ್ಚೆದೆ ಕಲಾಕಾರನಿಗೆ ಅತ್ಯವಶ್ಯ. ಎರಡನೇ ಜಾಗತಿಕ ಮಹಾಯುದ್ಧದ ಜ್ವಾಲೆ ಎಲ್ಲೆಡೆಗೆ ಹಬ್ಬಿದ್ದಾಗ, ಹಿಟ್ಲರನಂಥ ಬಲಿಷ್ಠ ಸರ್ವಾಧಿಕಾರಿಗೆ ಎಲ್ಲ ದೇಶಗಳೂ ಬೆದರುತ್ತಿದಾಗ ಡೇವಿಡ್ ಲೋನಂತಹ ವ್ಯಂಗ್ಯಚಿತ್ರಕಾರರು ಮಾತ್ರ ಮಣಿಯದೆ ಎಲ್ಲರಿಂದಲೂ ತಲೆದೂಗಿಸಿಕೊಂಡರು ಎಂದು ಹೇಳುತ್ತಾರೆ.

ವ್ಯಕ್ತಿಗಳು ಬೇರೆ ಬೇರೆಯಾಗಿ ವ್ಯಂಗ್ಯಚಿತ್ರದ ಬಗ್ಗೆ ಏನೇ ಹೇಳಿದರೂ ಸಮಗ್ರವಾಗಿ ಅದರರ್ಥ ಒಂದೇ: ಕಿರಿದರಲಿ ಪಿರಿದರ್ಥ. ಪ್ರಪಂಚದ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಂದ ತಡವಾಗಿಯಾದರೂ ಭಾರತಕ್ಕೆ ಬಂದ ಈ ಕಲೆ ದೇಶೀಯ ಭಾಷೆಗಳಲ್ಲಿ ಅರಳುವುದಕ್ಕೆ ಇನ್ನಷ್ಟು ಸಮಯ ಬೇಕಾಯಿತು. ಇಂಗ್ಲೀಷ್ ಪತ್ರಿಕೆಗಳು ಇಡೀದೇಶವನ್ನು ಒಟ್ಟಿಗೆ ಆವರಿಸಿದರೂ ದೇಶೀಯ ಜನ ಅವನ್ನು ಸ್ವೀಕರಿಸುವುದರಲ್ಲಿ ಭಿನ್ನಭಿನ್ನ ಧೋರಣೆ ತಳೆದರು. ಹೀಗಾಗಿ ಕೆಲವೇ ರಾಜ್ಯಗಳಲ್ಲಿ ವ್ಯಂಗ್ಯಚಿತ್ರಕಲೆಗೆ ಪ್ರೋತ್ಸಾಹ ಸಿಕ್ಕಿತು. ಅದರಲ್ಲಿ ಕರ್ನಾಟಕವೂ ಒಂದು. ಕರ್ನಾಟಕದಲ್ಲಿ ಯಾವುದೇ ಚಿತ್ರಕಲೆ ಅರಳುವುದಕ್ಕೆ ಬೇಕಾದ ತತ್ವ, ಸತ್ವ, ಮಹತ್ವಗಳಿವೆ.

ಸುಮಾರು ೧೬೦ ವರ್ಷಗಳ ಹಿಂದೆ ಕರ್ನಾಟಕದಲ್ಲಿ ಪತ್ರಿಕೋದ್ಯಮ ಜೀವತಳೆದಾಗ ಪತ್ರಿಕೆಗಳ ಗುರಿ ಬೇರೆಯೇ ಆಗಿತ್ತು. ಧರ್ಮಪ್ರಚಾರ, ಸಾಹಿತ್ಯಪ್ರಚಾರ, ಅನಂತರ ಸ್ವಾತಂತ್ರ್ಯ ಅಂದೋಲನಕ್ಕೆ ಪ್ರೇರಣೆ ಬಹುಮುಖ್ಯ ಗುರಿಯಾಗಿದ್ದವು.ರ ಇದರ ವಿನಾ ಬೇರಾವುದೇ ಚಿಂತನೆ ತಲೆಯಲ್ಲಿ ಕೆಲಸ ಮಾಡುವಂಥ ವಾತಾವರಣವೂ ಇರಲಿಲ್ಲ. ಆಡಳಿತಾರೂಢ ಬ್ರಿಟಿಷರನ್ನು, ಅವರ ಆಳ್ವಿಕೆಯ ಲೋಪ ದೋಷಗಳನ್ನು ಮೊದಮೊದಲಿಗೆ ಭಾರತದಲ್ಲಿ ವಿಡಂಬಿಸಿದ್ದು ಬಂಗಾಲಿ ಪತ್ರಿಕೆಗಳು. 'ಪಂಚ್' ಪತ್ರಿಕೆಯ ಪ್ರೇರಣೆ ಪಡೆದ ಭಾರತೀಯ ಪತ್ರಿಕೆಗಳು ವ್ಯಂಗ್ಯಚಿತ್ರದ ಪ್ರಭಾವವನ್ನು ಮನಗಂಡು ತಾವೂ ಪ್ರಕಟಿಸಲಾರಂಭಿಸಿದ್ದರ ಪರಿಣಾಮವಾಗಿ ಭಾರತದ ಪ್ರಥಮ ವ್ಯಂಗ್ಯಚಿತ್ರ ಬಂಗಾಲಿ ಪತ್ರಿಕೆಯಲ್ಲಿ ಪ್ರಕಟವಾಯಿತು.[೧೧]

೧೧. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೧೩

ದೇಶೀಯ ಭಾಷೆಗಳಲ್ಲಿ ಪತ್ರಿಕೆಗಳೇ ಇರಲಿಲ್ಲವಾದ್ದರಿಂದ ಮತ್ತು ಜನ ಅನಕ್ಷರಸ್ಥರಾಗಿದ್ದುದರಿಂದ ವ್ಯಂಗ್ಯಚಿತ್ರಗಳಿಗೆ ೧೯೦೭ರವರೆಗೂ ಅಸ್ತಿತ್ವ ಸಿಕ್ಕಲಿಲ್ಲ ಇಂಥ ದುರ್ಭಿಕ್ಷದಲ್ಲಿಯೂ ೧೯೦೭ರಲ್ಲಿ ಕನ್ನಡದಲ್ಲಿ ಒಂದು ಪತ್ರಿಕೆ, ಅದೂ ಹಾಸ್ಯಪತ್ರಿಕೆ 'ವಿಕಟಪ್ರತಾಪ' ಪ್ರಕಟವಾಯಿತು. ಇದರ ಕೀರ್ತಿ ಬೆಂಗಳೂರಿನ ಎಸ್.ಜಿ.ಎನ್. ಪ್ರೆಸ್‌ನ ಬಿ. ಬಸವಪ್ಪ ಶೆಟ್ಟಿಯವರಿಗೆ ಸಲ್ಲುತ್ತದೆ. 'ವಿಕಟ ಪ್ರತಾಪ' ಪ್ರಾರಂಭವಾದಾಗ ಅದಕ್ಕೆ ಚಿತ್ರ ಬರೆದವರು ಜನಾರ್ದನ ರಾವ್, ೧೮೯೬ರಲ್ಲಿ ಪ್ರಾರಂಭವಾದ ಎಸ್.ಜಿ.ಎನ್. ಪ್ರೆಸ್ ೧೯೦೭ರಲ್ಲಿ ವಿಕಟ ಪ್ರತಾಪ ಪ್ರಕಟಿಸಿದಾಗ ಅದರ ಸಂಪಾದಕರಾಗಿದ್ದವರು ಮದ್ರಾಸಿನಲ್ಲಿದ್ದರ ಚೆನ್ನಕೇಶವ ಅಯ್ಯಂಗಾರ್. ಸರ್ಕಾರದ ಕ್ರೂರದೃಷ್ಟಿಗೆ ತುತ್ತಾದ ಪತ್ರಿಕೆಯನ್ನು ಬೇರೊಬ್ಬರಿಗೆ ಹಸ್ತಾಂತರಿಸಿದಾಗ ಪತ್ರಿಕೆ ಕಣ್ಣುಮುಚ್ಚಿತು. ಛಲಬಿಡದ ಬಸವಪ್ಪ ಶೆಟ್ಟರು, ಎನ್. ಶಿವರಾಮಶಾಸ್ತ್ರಿಯವರ ಸಂಪಾದಕತ್ವದಲ್ಲಿ ೧೯೧೧ರಲ್ಲಿ 'ವಿಕಟ ವಿನೋದಿನಿ' ಆರಂಭಿಸಿದರು. ಹೀಗಾಗಿ ಕನ್ನಡದ ಪ್ರಥಮ ವ್ಯಂಗ್ಯಚಿತ್ರಗಳನ್ನು ಪ್ರಕಟಿಸಿದ ಕೀರ್ತಿ ವಿಕಟ ಪ್ರತಾಪ ಮತ್ತು ವಿಕಟ ವಿನೋದಿನಿ ಪ್ರಕಟವಾದಾಗ 'ಪಂಚ್' ಪತ್ರಿಕೆಯನ್ನಾಧರಿಸಿ ಒಂದು ಲೋಗೊ ಬರೆದ ಕಲಾವಿದ ಜನಾರ್ದನರಾವ್, ೧೯೨೨ರಲ್ಲಿ ಬಸವಪ್ಪ ಶೆಟ್ಟರು ತೀರಿಕೊಂಡ ನಂತರ ೧೯೩೦ರಲ್ಲಿ ಅವರ ಮಗ ಬಿ. ಶಿವಪ್ಪ ವಿಕಟವಿನೋದಿನಿಯ 'ಎಡಿಟರ್, ಪಬ್ಲಿಷರ್, ಪ್ರೊಪ್ರೈಟರ್' ಆಗಿ ಸತತವಾಗಿ ೫೩ ವರ್ಷ ನಡೆಸಿ ೧೯೭೪ರಲ್ಲಿ ಕೈಚೆಲ್ಲಿದರು. ಚಾಮರಾಜ ಪೇಟೆಯಲ್ಲಿ 'ಸಚಿತ್ರ ಚಾತುರ್ಯ' ಎನ್ನುವ ಮಾಸಪತ್ರಿಕೆಯನ್ನು ಕೆಲಕಾಲ ನಡೆಸಿದ ಜನಾರ್ದನ ರಾವ್ ಉಡುಪಿಗೆ ಮರಳಿದರು. ಹಾಫ್‌ಟೋನ್ ಮತ್ತು ಲೈನ್ ಬ್ಲಾಕುಗಳು ೧೯೩೦ರವರೆಗೂ ಮದ್ರಾಸಿನಿಂದಲೇ ಬರಬೇಕಾಗಿತ್ತು ಹೀಗಾಗಿ ಪದೇಪದೇ ಚಿತ್ರ ಬದಲಾಯಿಸುವುದು ಆ ದುಬಾರಿ ಕಾಲದಲ್ಲಿ ಸಾಧ್ಯವಿರಲಿಲ್ಲ ಎನ್ನುವ ಶಿವಪ್ಪ ಎರಡೂವರೆ ಸಾವಿರ ಪ್ರತಿಗಳಿಗೆ ೭೦-೮೦ ರೂಪಾಯಿ ಖರ್ಚಾಗುತ್ತಿತ್ತು ಎಂದು ಸ್ಮರಿಸಿಕೊಳ್ಳುತ್ತಾರೆ.

೧೯೩೨ರಲ್ಲಿ 'ನಗುನಂದ' ಪ್ರಾರಂಭವಾಯಿತು. ಹೆಸರೇ ಹೇಳುವಂತೆ ಸೃಜನ ಚಿಂತನೆಗಾಗಿ, ಸುಜನರಿಗಾಗಿ ೧೯೫೨ರಲ್ಲಿ ಸುಬೋಧ ಮಾಸಪತ್ರಿಕೆಯನ್ನು ಪ್ರಾರಂಭಿಸಿದ ಎಂ. ರಾಮರಾಯರು ನೂತನ ಮನೋ ಭಾವದ ಕೆಲವು ಕಥೆಗಳನ್ನು ಪ್ರಕಟಿಸಬೇಕೆಂದು, ಆಗಲೇ ಮುಂಬಯಿ ಸೇರಿ 'ದಿ ಟೈಮ್ಸ್ ಆಫ್ ಇಂಡಿಯಾ' ಪತ್ರಿಕಾ ಬಳಗದಲ್ಲಿ ಚಿತ್ರಕಲಾವಿದರಾಗಿದ್ದ ತಮ್ಮ ಸೋದರಳಿಯ ಹೆಚ್.ಎಸ್. ರಾಘುವೇಂದ್ರ ಅವರನ್ನು ಕೇಳಿದಾಗ ಹೊರ ಹೊಮ್ಮಿದ ಐಡಿಯಾ 'ನಗುವನಂದ' ಸ್ಥಾಪನೆ. ಇದನ್ನು ಸೂಚಿಸಿದ ರಾಘುವೇಂದ್ರ ಮುಖಚಿತ್ರದ ಮೇಲೆ ಬರೆದ ಶೀರ್ಷಿಕೆ ಮೊದಲೆರಡು ವರ್ಷ ಒಂದೇ ಸ್ಥಿರಶೀರ್ಷಿಕೆಯಾಗಿತ್ತು. ಅನಂತರ ಪ್ರತಿ ತಿಂಗಳೂ ಹೊಸಹೊಸ ವ್ಯಂಗ್ಯಚಿತ್ರಗಳು ಮುಖಚಿತ್ರಕ್ಕೆ ಬಂದವು. 'ಕೊರವಂಜಿ' ಬಂದ ಮೇಲೆ ಒಳಪುಟಗಳಲ್ಲಿಯೂ ವ್ಯಂಗ್ಯಚಿತ್ರ ಪ್ರಕಟನೆ ಪ್ರಾರಂಭವಾಯಿತು. ಸುಬೋಧ ಮತ್ತು ನಗುವನಂದ ವಾರ್ಷಿಕ ವಿಶೇಷಾಂಕಗಳೂ ಉತ್ತಮ ಮಟ್ಟದ ಪ್ರಕಟಣೆಗಳಾಗಿದ್ದವು. ಪಂಚ್ ಹಾಗೂ ಹ್ಯೂಮರಿಸ್ಟ್ ಪತ್ರಿಕೆಗಳನ್ನು ಆದರ್ಶವಾಗಿಟ್ಟುಕೊಂಡು ಬೆಳೆದ ರಾಘುವೇಂದ್ರ ನಗುವ ನಂದದ ಜೊತೆಯಲ್ಲಿಯೇ ಕಾಣದಾಗಿದ್ದು ವಿಷಾದದ ಸಂಗತಿ. ಕಲಾವಿದ ರಾಘುವೇಂದ್ರ ಇದಕ್ಕಾಗಿ ಮುಂಬಯಿನಿಂದ ಮುಖಚಿತ್ರ ರಚಿಸಿದರು. ಅಲ್ಲದೆ ಪ್ರಸಿದ್ಧ ಇಂಗ್ಲೀಷ್ ಮತ್ತು ಮರಾಠಿ ಚಿತ್ರಕಾರರ

ಚಿತ್ರಗಳನ್ನು ರಾಘವೇಂದ್ರ 'ನಗುವನಂದ'ಕ್ಕೆ ಕಳಿಸುತ್ತಿದ್ದರು.[೨೨] ೧೯೩೪ರಿಂದ ಸತತವಾಗಿ ಪತ್ರಿಕೆಯ ಮುಖಪುಟದಲ್ಲಿ ವ್ಯಂಗ್ಯಚಿತ್ರ ರಚಿಸಿದ ಕೀರ್ತಿ ಅವರದು. ಈ ಮಧ್ಯೆ ಪತ್ರಿಕೆಗೆ ಮದ್ರಾಸಿನಲ್ಲಿದ ಸಿಂಹ, ಗೋಪಿ, ಸತ್ಯ ಅವರಲ್ಲದೆಕಲಾವಿದ ರಂಗಾ ಅವರೂ ಚಿತ್ರ ಬರೆಯಲಾರಂಭಿಸಿದರು. ಇದೇ ಅವಧಿಯಲ್ಲಿ ಆರ್.ಎಸ್. ನಾಯ್ಡು ಅವರು ಕರ್ನಾಟಕದ ಒಬ್ಬ ಶ್ರೇಷ್ಠ ಕ್ಯಾರಿಕೇಚರಿಸ್ಟ್ ಆಗಿ ಪ್ರಸಿದ್ಧಿ ಪಡೆದರು. ಆ ಕಾಲದ ಅತ್ಯಂತ ಮಹತ್ವದ ಪ್ರಕಟಣೆಗಳಲ್ಲಿ ಅವರ ಚಿತ್ರಗಳು ಪ್ರಕಟವಾದವು. ಅವರ ಚಿತ್ರಶೈಲಿ ಇಂದಿಗೂ ಜನಪ್ರಿಯವಾಗಿದೆ.

ಬೆಂಗಳೂರಿನಲ್ಲಿ ಹುಟ್ಟಿದ ಆರ್. ಸೀತಾಪತಿ ನಾಯ್ಡು ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಸ್ವಾತಂತ್ರ್ಯ ಚಳವಳಿ ಸೇರಿ ಜೈಲುಶಿಕ್ಷೆ ಅನುಭವಿಸಿದವರು. ಕ್ರಾಂತಿಕಾರಿ ಮನೋಭಾವದ ಅವರು ಮುಂಬಯಿ ಜೀವನದ ಅನಂತರ ಬೆಂಗಳೂರಿನಲ್ಲಿ ಕೆಲ ಕಾಲವಿದ್ದು ಮೈಸೂರಿನಲ್ಲಿ ನೆಲೆಗೊಂಡರು. ಸ್ಫೂರ್ತಿ ಬಂದಾಗ ಚಿತ್ರ ರಚಿಸುವ ಹವ್ಯಾಸವಿದ್ದನಾಯ್ಡು ಅವರಿಂದ ಪ್ರಜಾವಾಣಿಯ ಟಿ.ಎಸ್. ರಾಮಚಂದ್ರರಾವ್ (ಟೀಎಸ್ಸಾರ್) ವಿಶೇಷ ಸಂದರ್ಭಗಳಲ್ಲಿ ಚಿತ್ರ ಬರೆಸಿದ್ದಾರೆ. ಅವರಲ್ಲಿ ಚಿತ್ರ ಹಾಗೂ ಶಿಲ್ಪ ಎರಡೂ ಕಲೆಗಳ ಪರಿಪೂರ್ಣ ವಿಕಾಸವಿತ್ತು. ಆರ್.ಎಸ್.ಎನ್. ರಚಿಸಿದ ಚಿತ್ರಗಳ ರೇಖೆಗಳಲ್ಲಿ ಜೀವಂತಿಕೆ ತುಂಬಿ ತುಳುಕುತ್ತಿತ್ತು. ಅವರ ರೇಖಾಚಿತ್ರಗಳ ವಸ್ತು ವಿಶೇಷ, ಕಲ್ಪನಾಶಕ್ತಿ ಅಪೂರ್ವವಾಗಿತ್ತು. ಒಂದೆಡೆ ನೆಲೆನಿಂತಿದ್ದರೆ ಅವರು ರಾಷ್ಟ್ರದ ಅಪೂರ್ವ ಪ್ರತಿಭೆಯಾಗಬಹುದಿತ್ತು ಆದರೂ ಇಷ್ಟರ ಮಟ್ಟಿಗಾದರೂ ಅವರಿಂದ ಕೃಷಿಯಾಗಿರುವುದೇ ಸಮಾಧಾನದ ವಿಷಯವಾಗಿದೆ. ಈ ವ್ಯಂಗ್ಯಚಿತ್ರಕಲಾ ಪ್ರಪಂಚಕ್ಕೆ ಎನ್ನಬಹುದಾಗಿದೆ.

ಕರ್ನಾಟಕದಲ್ಲಿ ವ್ಯಂಗ್ಯಚಿತ್ರಕಲೆಯ ಪ್ರಾರಂಭವನ್ನು ಗಮನಿಸಿದಾಗ ಮೊದಮೊದಲು ಕಂಡುಬರುವ ಹಲವಾರು ಹೆಸರುಗಳಲ್ಲಿ ಎಸ್.ಎಸ್. ಪಡುಬಿದ್ರಿಯವರದೂ ಒಂದು. ಹಾಗೆಯೇ ವಿಶೇಷಾಂಕಗಳಲ್ಲಿ ಆಗಾಗ್ಗೆ ಕಂಡುಬಂದ ರಮೇಶ್ ಎನ್ನುವವರೂ ಒಬ್ಬರಾಗಿದ್ದರು.

೧೯೪೨ನೇ ಏಪ್ರಿಲ್ ೧ನೇ ತಾರೀಖು ಮೂರ್ಖರ ದಿನಾಚರಣೆಯ ದಿನ ಡಾ|| ಎಂ. ಶಿವರಾಂ ಅವರಿಂದ 'ಕೊರವಂಜಿ' ಪ್ರಾರಂಭವಾಯಿತು. ಮೂಲತಃ ಒಬ್ಬ ಉತ್ತಮ ಲೇಖಕರೂ, ವಿಡಂಬನಕಾರರೂ ಆಗಿದ್ದ ವೈದ್ಯ ಡಾ|| ಶಿವರಾಂ. ಅವರ 'ಕೊರವಂಜಿ' ಭಾರತಕ್ಕೆ ಆರ್.ಕೆ. ಲಕ್ಷ್ಮಣ್ ಮತ್ತು ಬಿ.ವಿ. ರಾಮಮೂರ್ತಿ ಅವರಂಥ ಇಬ್ಬರು ಶ್ರೇಷ್ಠ ವ್ಯಂಗ್ಯಚಿತ್ರಕಾರರುಗಳನ್ನು ನೀಡಿದ್ದಲ್ಲದೆ ಹಲವಾರು ವ್ಯಂಗ್ಯ ಚಿತ್ರಕಾರರು ಬೆಳೆದುಬರಲು ಪ್ರತ್ಯಕ್ಷ ಉತ್ತೇಜನ ನೀಡಿತು.

ಆರ್.ಕೆ. ಲಕ್ಷ್ಮಣ್ ಇಂದು ಅಂತರರಾಷ್ಟ್ರೀಯ ಖ್ಯಾತಿವೆತ್ತ ಕಲಾವಿದ. ಮ್ಯಾಗ್ಸೆಸೆ, ಪದ್ಮಭೂಷಣ ಮತ್ತು ಡಾಕ್ಟೊರೆಟ್ ಪಡೆದಿರುವ ಅವರು ವಿಶ್ವವಿಖ್ಯಾತ ಲೇಖಕ ಆರ್.ಕೆ. ನಾರಾಯಣ್ ಅವರ ತಮ್ಮ. 'ಕೊರವಂಜಿ'ಯಲ್ಲಿ ಆರಂಭಿಸಿದ ತಮ್ಮ ವ್ಯಂಗ್ಯಚಿತ್ರ ರಚನಾ ಕೌಶಲವನ್ನು 'ಫ್ರೀಪ್ರೆಸ್ ಜರ್ನಲ್'ನಲ್ಲಿ ಮುಂದುವರೆಸಿ ದುಡಿಯುತ್ತಿರುವ ಲಕ್ಷ್ಮಣ್ ತಮ್ಮ 'ಶ್ರೀಸಾಮಾನ್ಯ'ನಂತೆಯೇ ಸರಳ ವ್ಯಕ್ತಿ. ಒಬ್ಬ

---

೨೨. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೧೪

ವ್ಯಂಗ್ಯಚಿತ್ರಕಾರನಾಗಿ ಸುವರ್ಣೋತ್ಸವವನ್ನೂ ಮೀರಿ ಮುನ್ನಡೆಯುತ್ತಿರುವ ಲಕ್ಷ್ಮಣ್ ಅವರ ಶ್ರೀಸಾಮಾನ್ಯ ಕೇವಲ ಮೌನದಿಂದಲೇ ಎಲ್ಲವನ್ನೂ ಸಾಧಿಸಿ ಸಮಾಜ ಮುಖಿಯಾಗಿ ತನ್ನ ವ್ಯಕ್ತಿತ್ವ ಬೆಳೆಸಿಕೊಂಡು ಇಡೀ ರಾಷ್ಟ್ರದ ಆಸ್ತಿಯಾಗಿದ್ದಾರೆ. ಡೇವಿಡ್ ಲೋ ಅವರಿಂದ ಸ್ಫೂರ್ತಿ ಪಡೆದಿರುವ ಲಕ್ಷ್ಮಣ್ ಚಿತ್ರಗಳು ಅಂದಿನಿಂದ ಇಂದಿನವರೆಗೂ ಒಂದೇ ಉನ್ನತ ಗುಣಮಟ್ಟವನ್ನು ಉಳಿಸಿಕೊಂಡು ಬಂದಿವೆ. ಖಚಿತವಾದ ನಿಖರ ವಿವರಣೆ, ಪಾತ್ರದ ವಿವಿಧ ಭಾವ, ಒಂದು ಉತ್ಕೃಷ್ಟ ಚಿತ್ರ ನೋಡಿದ ರಸಾನುಭವ ಅವರ ಚಿತ್ರಗಳಿಂದಾಗುತ್ತದೆ. ಜೊತೆಗೆ ಅವು ಯಾವುವೂ ನಮ್ಮ ಸ್ಮೃತಿಪಟದಿಂದ ಬೇಗನೆ ಮರೆಯಾಗದೆ ನಮ್ಮನ್ನು ಬಹುಕಾಲ ಚಿಂತನೆಗೀಡುಮಾಡುತ್ತವೆ ಎಂಬುದೂ ಲಕ್ಷ್ಮಣ್‌ರವರ ವ್ಯಂಗ್ಯಚಿತ್ರಗಳು ಜೀವಂತಿಕೆಗೆ ಸಾಕ್ಷಿಯಾಗಿವೆ.[೧೩]

ಕನ್ನಡ ನೆಲದ ಅಪೂರ್ವ ಕೊಡುಗೆಗಳಾಗಿರುವ ರಾಮ ಲಕ್ಷ್ಮಣರಲ್ಲಿ ಲಕ್ಷ್ಮಣ್ ಮುಂಬಯಿಗೆ ಹಾರಿದರೂ ಬಿ.ವಿ. ರಾಮಮೂರ್ತಿ ಇಲ್ಲಿಯೇ ಉಳಿದಿದ್ದು ನಮ್ಮ ಪುಣ್ಯ. ಅಲ್ಲದೆ ನಮ್ಮ ಕರ್ನಾಟಕ ವ್ಯಂಗ್ಯ ಚಿತ್ರ ಲೋಕದ ಬೆಳವಣಿಗೆಯಲ್ಲಿ ಒಂದು ಪ್ರಮುಖ ಪಾತ್ರವಹಿಸಿದ್ದಾರೆಂದು ಹೇಳಿದರೆ ತಪ್ಪಾಗಲಾರದು. ಬೆಂಗಳೂರಿನಲ್ಲಿ ಜನಿಸಿದ ಅವರು ಬಾಲ್ಯದಲ್ಲಿಯೇ ಮನೆಯ ಗೋಡೆಗಳ ಮೇಲೆ ಚಿತ್ರ ಬಿಡುಸುತ್ತಿದ್ದವರು. ವಿದ್ಯಾಭ್ಯಾಸದ ನಂತರ ೧೯೫೦ರಿಂದ ಶೇಷಪ್ಪನವರ 'ಕಿಡಿ' ಪತ್ರಿಕೆಗೆ ರಾಜಕೀಯ ಚಿತ್ರಗಳನ್ನು ಬರೆಯಲಾರಂಭಿಸಿದ ಮೂರ್ತಿ, 'ಕೊರವಂಜಿ'ಯ ನಂತರ ಮುಂದೆ ಪೋತೆನ್ ಜೋಸೆಫ್ ಅವರ ಕಣ್ಣಿಗೆ ಬಿದ್ದು ಡೆಕ್ಕನ್ ಹೆರಾಲ್ಡ್ ಪತ್ರಿಕಾ ಬಳಗ ಸೇರಿಕೊಂಡು, ಪ್ರಜಾವಾಣಿ, ಸುಧಾ, ಮಯೂರಗಳ ಮೂಲಕ ಬಹುಬೇಗ ನಾಡಿನ ಪ್ರಸಿದ್ಧ ಕಲಾವಿದರಾದರು. ಕಲಾವಿದನ ಕುಂಚ, ಸಾಹಿತಿಯ ಸ್ವೋಪಜ್ಞತೆಗಳನ್ನು ಪರಿಪೂರ್ಣವಾಗಿ ಮೇಳೈಸಿಕೊಂಡಿದ್ದ ಅಭಿಜಾತ ವ್ಯಂಗ್ಯ ಚಿತ್ರಕಾರ ಮೂರ್ತಿಯವರ ವಿಡಂಬನ ಶಕ್ತಿ ಅಪೂರ್ವವೆನಿಸುವ ರೀತಿಯಲ್ಲಿತ್ತು. ಟಿಎಸ್ಸಾರ್ ಮಾತಿನಲ್ಲಿ ಹೇಳುವುದಾದರೆ: ಮೂರ್ತಿ ಚಿಕ್ಕದಾದರೂ ಪೂರ್ತಿ ಕೀರ್ತಿ ಪಡೆಯಬಲ್ಲ ಪ್ರತಿಭೆಯ ತಲೆ, ಕೈ, ಕುಂಚಗಳನ್ನು ಪಡೆದೇ ಭೂಮಿಗಿಳಿದ ಮೂರ್ತಿ ಜಗತ್ತಿನಲ್ಲಿಯೇ ಪ್ರಸಿದ್ಧರಾಗಿರುವ ಕೆಲವೇ ಮಂದಿ ಸಿದ್ಧಹಸ್ತ ವ್ಯಂಗ್ಯ ಚಿತ್ರಕಾರರಲ್ಲಿ ಒಬ್ಬ ಎಂದು ಹೇಲಲು ಲೇಶವೂ ಹಿಂಜರಿಕೆಯಿಲ್ಲ. ವ್ಯಂಗ್ಯಚಿತ್ರಗಳಲ್ಲಿ ರೂಪಕದ ಬಳಕೆಯ ಆಗಾಧ ಪ್ರಭಾವವನ್ನು ಯಶಸ್ವಿಯಾಗಿ ಬಳಸಿಕೊಳ್ಳುತ್ತಿದ್ದ ಮೂರ್ತಿ ಈ ಕರ್ತೃತ್ವ ಶಕ್ತಿಯಿಂದಾಗಿಯೇ ಎಲ್ಲರಿಗಿಂತ ಮುಂದೆ ವಿಶೇಷವಾಗಿ ವಿಶಿಷ್ಟವಾಗಿ ನಿಂತಿದ್ದು ಗಮನಾರ್ಹ. ಹಾಗೆಯೇ ತಮ್ಮ ಟೀಕೆ, ವಿಡಂಬನೆಗಳಿಗೆ ಪೂರಕವಾಗಿ ಪೌರಾಣಿಕ ಪಾತ್ರಗಳನ್ನು, ಪ್ರಸಂಗಗಳನ್ನು, ಸಾಲುಗಳನ್ನು, ಸಾಹಿತ್ಯವನ್ನು ಬಳಸಿಕೊಂಡು ಪ್ರಸ್ತುತ ಪ್ರಸಂಗ ಚಿತ್ರಗಳಲ್ಲಿ ರೂಪಶಕ್ತಿಯ ಚಿರಂತನ ಪ್ರಭಾವವನ್ನು ಬಹುಚೆನ್ನಾಗಿ ಮನಗಂಡಿದ್ದರು. ಆರ್.ಕೆ. ಲಕ್ಷ್ಮಣ್ ಅವರ ಜನಪ್ರಿಯತೆಯಲ್ಲಿಯೂ ಈ ರೂಪಕಶಕ್ತಿ ಮಹತ್ತರ ಪಾತ್ರವಹಿಸಿದೆ. ಹೊಸ ಪೀಳಿಗೆಯ ಯುವಕಲಾವಿದರಿಗೆ ಇದು ಮಾದರಿಯಾಗಬೇಕಾದ ಅನಿವಾರ್ಯತೆಯಿದೆ.

ಹಾಗೆಯೇ ಭಾಗಭಾಗಗಳಲ್ಲಿ ವಾರಕ್ಕೆ ಒಂದಿಷ್ಟರಂತೆ ಪ್ರಕಟವಾಗಿ ಈಚೆಗೆ ಜನಪ್ರಿಯವಾಗುತ್ತಿರುವ ಸರಣಿ ವ್ಯಂಗ್ಯ ಚಿತ್ರಮಾಲಿಕೆಗಳ ಸೃಷ್ಟಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಅಂಕುರಾರ್ಪಣ ಮಾಡಿದವರೂ ಮೂರ್ತಿಯವರೇ ಎಂಬುದು ತುಂಬಾ ಜನಕ್ಕೆ ಗೊತ್ತಿಲ್ಲದ ವಿಷಯ. ಅರವತ್ತರ ದಶಕದಲ್ಲಿ ಅವರು ಬರೆದ

---

೧೩. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೧೫

'ಚೆನ್ನಿ' ಚಿತ್ರಮಾಲಿಕೆ ಪ್ರತಿ ಭಾನುವಾರದ ಪ್ರಜಾವಾಣಿ ಸಾಪ್ತಾಹಿಕ ಪುರವಣಿಗೆಯಲ್ಲಿ ಹಲವಾರು ವಾರ ಪ್ರಕಟವಾಗಿ ಜನಪ್ರಿಯತೆ ಗಳಿಸಿಕೊಂಡಿತ್ತು. ಈ ವ್ಯಂಗ್ಯಚಿತ್ರ ಮಾಲಿಕೆಯ ಕಥೆ ಬರೆದಿದ್ದವರು ನಾಡಿನ ಪ್ರಸಿದ್ಧ ಪತ್ತೇದಾರಿ ಕಾದಂಬರಿಕಾರರಾಗಿದ್ದರು ಮ. ರಾಮಮೂರ್ತಿರವರು.

ಚಿತ್ರಕಲೆಯಲ್ಲಿನ ಅಗಾಧ ಸಾಮರ್ಥ್ಯ, ಅಪೂರ್ವ ವಿಡಂಬನೆಯ ಶಕ್ತಿ ಮತ್ತು ಇಂಗ್ಲೀಷ್ ಹಾಗೂ ಕನ್ನಡ ಸಾಹಿತ್ಯದ ಮೇಲಿನ ಅದ್ಭುತ ನಿಯಂತ್ರಣಗಳನ್ನು ಮೇಳೈಸಿಕೊಂಡಿದ್ದ ಪ್ರಭುದ್ಧ ಕಲಾವಿದ ಮೂರ್ತಿ ೪೯ ವರ್ಷಗಳ ಕಾಲ ಸೇವೆ ಸಲ್ಲಿಸಿ ೧೯೭೨ರಲ್ಲಿ ನಿವೃತ್ತರಾದರು. ತಮ್ಮ ಕೊನೆಯ ಉಸಿರಿನವರೆಗೂ ವ್ಯಂಗ್ಯಚಿತ್ರ ರಚಿಸಿದ ಮೂರ್ತಿ ೨೪ನೇ ಮಾರ್ಚ್ ೨೦೦೪ರಂದು ನಿಧನರಾದರು. ಮಿತಭಾಷಿ ಹಾಗೂ ಗಂಭೀರವದನರಾಗಿದ್ದ ಮೂರ್ತಿ ವ್ಯಂಗ್ಯ ಚಿತ್ರಕಲೆಯ ಬಗ್ಗೆ ವಿಚಾರಾತ್ಮಕವಾಗಿ ಮಾತನಾಡಬಲ್ಲವರಾಗಿದ್ದರು. ಈ ಕಲೆಯ ಸಂಪೂರ್ಣ ಇತಿಹಾಸವನ್ನು ಅವರು ಅಭ್ಯಾಸ ಮಾಡಿದ್ದರು. ಮೂರ್ತಿಯವರ ನಿಧನದಿಂದ ವ್ಯಂಗ್ಯ ಚಿತ್ರರಂಗ ನಿಜವಾದ ಅರ್ಥದಲ್ಲಿ ಬಡವಾಯಿತು.[೧೪]

ಆರ್.ಕೆ. ಲಕ್ಷ್ಮಣ್ ಅವರು ಕೊರವಂಜಿಯನ್ನರು ಬಿಟ್ಟು ಮುಂಬಯಿಗೆ ಹೋದಮೇಲೆ ಶಿವರಾಂ ಅವರೇ ಸ್ವತಃ ವಿವರಿಸಿರುವಂತೆ ಕೊರವಂಜಿ ಒದ್ದಾಡುತ್ತಿದ್ದಾಗ ಪ್ರಜಾವಾಣಿ ಮತ್ತು ಡೆಕ್ಕನ್ ಹೆರಾಲ್ಡ್‌ನಲ್ಲಿ ರಾಮಮೂರ್ತಿಯವರ ವ್ಯಂಗ್ಯಚಿತ್ರಗಳು ಬರಲಾರಂಭಿಸಿದವು. "ಓ ಲಕ್ಷ್ಮಣಾ! ಬೊಂಬಾಯಿಗೆ ಹೋದೆಯಾ!" ಎಂದೆನ್ನುತ್ತಿದ್ದಾಗ "ಖಿನ್ನನಾಗ ಬೇಡ, ಕನ್ನಡಿಗ ರಾಮಮೂರ್ತಿಯೇ ನಾನು ಬಂದಿದ್ದೇನೆ" ಎಂದಂತಾಯಿತು. ಸಂಸ್ಪಷ್ಟ ದೃಢ ಗೆರೆಗಳು, ಮೂರು ನಾಲ್ಕು ಗೆರೆಗಳಲ್ಲಿಯೇ ಮುಖದ ಚಹರೆಯನ್ನು ತೋರಿಸುವ ಚೂಟಿ, ಸುತ್ತಲೂ ಸಂಭವಿಸುತ್ತಿರುವ ರಾಜಕೀಯ, ಸಾಮಾಜಿಕ, ಆಡಳಿತದ ವಿಷಯಗಳ ಪ್ರಜ್ಞೆ, ನಮ್ಮ ಮತ್ತು ಆಂಗ್ಲಸಾಹಿತ್ಯದ ಪರಿಚಯ ಎಲ್ಲವೂ ಮೂರ್ತಿಯಲ್ಲಿದ್ದವು. ಆಜನ್ಮ ಪ್ರತಿಭಾವಂತ. ಹೀಗೆ ಬರೆಯುವ ರಾಶಿ ಅವರೇನೂ ಸಾಮಾನ್ಯರಾದವರಲ್ಲ. ತಾವೇ ಒಬ್ಬ ಒಳ್ಳೆಯ ಲೇಖಕರಾಗಿದ್ದರೂ ತಮ್ಮ ಪತ್ರಿಕೆಯ ಮೂಲಕರ ನೂರಾರು ಲೇಖಕರನ್ನು, ಚಿತ್ರಕಾರರನ್ನು ಬೆಳಕಿಗೆ ತಂದ ಪರೋಪಕಾರ ಪ್ರವೃತ್ತಿಯ ಅದ್ಭುತ ಪ್ರತಿಭಾವಂತರು. ಕನ್ನಡನಾಡು ನುಡಿಯ ಬಗ್ಗೆ ಅಪಾರ ಅಭಿಮಾನವಿರಿಸಿದ್ದ ರಾಶಿ ಈ ನಾಡಿನ ಆಸ್ತಿ. ಕೊರವಂಜಿಯ ಆಗಮನ, ನಿರ್ಗಮನ ಕೇವಲ ನೆಪವಾದರೂ ಇದರಿಂದ ಅವರು ಸಲ್ಲಿಸಿದ ಸೇವೆ ಚಿರನೂತನ: ಇಲ್ಲವಾದಲ್ಲಿ ಈ ನಾಡಿಗೆ ಅಪಾರ ಕೀರ್ತಿ ತಂದ ಹತ್ತಾರು ಕಲಾವಿದರು, ಬರೆಹಗಾರರು ಬೆಳಕಿಗೇ ಬರುತ್ತಿರಲಿಲ್ಲವೇನೋ! ಎಂಬುದನ್ನು ಗಂಭೀರವಾಗಿ ಯೋಚಿಸಬಹುದಾಗಿದೆ.

ಕೊರವಂಜಿಯ ರಾಶಿಯವರು ಆ ಕಾಲಧ ಪ್ರಸಿದ್ಧ ವಾಣಿಜ್ಯ ಕಲಾವಿದರಾಗಿದ್ದ ಆರಗಂ, ಕುಕ್ಕೆ ಮತ್ತು ಅನಂತಯ್ಯನವರಿಂದಲೂ ಚಿತ್ರ ಬರೆಸಿದರು. 'ಕೊರವಂಜಿ' ಬಿಟ್ಟು ಆರ್.ಕೆ. ಲಕ್ಷ್ಮಣ್ ಮುಂಬಯಿನತ್ತ ನಡೆದಾಗ ಡಾ|| ಶಿವರಾಂ ಅವರು ಹತ್ತಿರದ ಬಳೇಪೇಟೆ, ಚಿಕ್ಕಪೇಟೆಗಳಲ್ಲಿ ಕಮರ್ಷಿಯಲ್ ಆರ್ಟ್ ಮಾಡುತ್ತಿದ್ದ ಕಲಾವಿದರನ್ನು ಹುಡುಕಿದರು ಆಗ ಸಿಕ್ಕವರು ಎಸ್.ಎನ್. ಕುಕ್ಕೆ, ಆರಗಂ ಕೃಷ್ಣಮೂರ್ತಿ ಮತ್ತು ಎ. ಅನಂತಯ್ಯ. ರಾಶಿ ಜೋಕ್ ಹೇಳಿ ಇವರಿಂದ ಬಲವಂತವಾಗಿ ಚಿತ್ರ ಬರೆಸುತ್ತಿದ್ದರು. ೧೯೪೪ರಲ್ಲಿ ಎಸ್.ಎಸ್. ಕುಕ್ಕೆ

೧೪. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೧೫

ರಾಶಿಯವರ ಗಮನಕ್ಕೆ ಬಂದರೂ ಪ್ರತಿತಿಂಗಳ ಮೂರನೇ ಭಾನುವಾರ ರಾಶಿಯವರ ಮನೆಯ ಮೀಟಿಂಗಿನಲ್ಲಿ ಚಿತ್ರದ ಬಗ್ಗೆ ಮಾರ್ಗದರ್ಶನ ಸಿಕ್ಕುತ್ತಿತ್ತು. ಆಗ ಅಲ್ಲಿ ಜಿ.ಪಿ. ರಾಜರತ್ನಂ, ಟೀಯೆಸ್ಸಾರ್ ಮತ್ತು ನಾ. ಕಸ್ತೂರಿಯವರೂ ಇರುತ್ತಿದ್ದರು. ಆರಗಂ ಕೃಷ್ಣಮೂರ್ತಿ ೧೯೪೨ರಲ್ಲಿ ಮೈಸೂರಿನಲ್ಲಿದ್ದ 'ತಮಾಷ್' ಪತ್ರಿಕೆಗೆ ವ್ಯಂಗ್ಯಚಿತ್ರ ಬರೆದಿದ್ದವರು. ೧೯೪೫ರಲ್ಲಿ ರಾಶಿ ಭೇಟಿ. ಅವರ ಮಾರ್ಗದರ್ಶನದಲ್ಲಿ ವ್ಯಂಗ್ಯಚಿತ್ರ ರಚನೆ ಆರಂಭ. ರಾಶಿಯವರ ಅತಿಥ್ಯದ ಬಗ್ಗೆ ಆರಗಂ ಅವರಿಗೆ ತೀರದ ಅಭಿಮಾನವೆನ್ನಬಹುದು.

ಬೆಂಗಳೂರಿನ ತುಳಸಿ ತೋಟದ ಪಕ್ಕದಲ್ಲಿರುವ ಎವರೆಸ್ಟ್ ಹೋಟೆಲ್ ಪಕ್ಕದ ಬೀದಿಯಲ್ಲಿ ವಾಣಿಜ್ಯ ಕಲಾ ಸ್ಟುಡಿಯೊ ನಡೆಸುತ್ತಿರುವ ಎ. ಅನಂತಯ್ಯನವರು ಟೀಎಸ್ಸಾರ್ ಅವರ ಮೂಲಕ ರಾಶಿಯವರಿಗೆ ಪರಿಚಿತರಾದವರು. ರಾಶಿಯವರು ನೀಡುತ್ತಿದ್ದ ವಿಶಿಷ್ಟ ಮಾರ್ಗದರ್ಶನ ಅವರಲ್ಲಿದ್ದ ವ್ಯಂಗ್ಯ ಚಿತ್ರಕಾರನನ್ನು ಅರಳಿಸಿತು. ಕೊರವಂಜಿಯಿಂದ ಬೆಳಕಿಗೆ ಬಂದ ಮತ್ತೊಂದು ಪ್ರತಿಭೆ ಎಸ್.ಕೆ. ನಾಡಿಗ್. ಕೊರವಂಜಿ ಪತ್ರಿಕೆ ನಿಂತ ಮೇಲೆ ನಾಡಿಗ್ ಅವರನ್ನುಳಿದು ಬೇರೆಲ್ಲರೂ ವ್ಯಂಗ್ಯ ಚಿತ್ರ ಬರೆಯುವುದನ್ನು ನಿಲ್ಲಿಸಿದರು.[೧೫]

೧೯೪೮ರಲ್ಲಿ ಎಂ. ರಾಮಯ್ಯನವರ ಸಂಪಾದಕತ್ವದಲ್ಲಿ 'ಆನಂದಜ್ಯೋತಿ' ಪತ್ರಿಕೆಯಲ್ಲಿ ಪ್ರಕಟವಾಗಿದ್ದು ಹಾಗೂ ೧೯೫೧ರಲ್ಲಿ ಜಿ. ನಾರಾಯಣ ಅವರಿಂದ 'ವಿನೋದ' ಪತ್ರಿಕೆ ಪ್ರಾರಂಭವಾಗಿದ್ದು ವ್ಯಂಗ್ಯಚಿತ್ರ ಕಲಾವಿದರಿಗೂ, ಹಾಸ್ಯ ಪ್ರೇಮಿಗಳಿಗೂ ಸಮಾನ ಸಂತೋಷವನ್ನುಂಟುಮಾಡಿದವು. ೧೯೫೧ನೇ ಜನವರಿ ೨೬ರಂದು ಪ್ರಾರಂಭವಾದ 'ವಿನೋದ' ಜಿ. ನಾರಾಯಣರ ಅವರ ಸಾಹಸ ಪ್ರವೃತ್ತಿಗೆ ದ್ಯೋತಕವಾಗಿ ಇಂದೂ ಉಳಿದಿದ್ದು, ನೂರಾರು ಲೇಖಕರಿಗೆ ಹತ್ತಾರು ಕಲಾವಿದರ ಅಪೂರ್ವವೆನ್ನುವ ರೀತಿಯಲ್ಲಿ ಉತ್ತೇಜನ ನೀಡಿ ಬೆಳೆಸುತ್ತಿದೆ. ಕಾಂಗ್ರೆಸ್ಸಿನ 'ವಾರ್ತಾ' ಪತ್ರಿಕೆಯ ವ್ಯವಸ್ಥಾಪಕರಾಗಿದ್ದ ದೇಶಹಳ್ಳಿ ಜಿ. ನಾರಾಯಣ ಹತ್ತೊಂಬತ್ತು ವರ್ಷದ ಯುವಕನಾಗಿದ್ದಾಗಲೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಸೆರೆಮನೆಯನ್ನು ಕಂಡಿದ್ದವರು. ಒಳ್ಳೆಯ ಸಂಘಟಕರು, ದೂರದೃಷ್ಟಿಯುಳ್ಳ ಸಜ್ಜನರು. ರಾಶಿಯವರಿಂದ 'ಕೊರವಂಜಿ ಅಕ್ಕ, ವಿನೋದ ತಮ್ಮ' ಎನಿಸಿಕೊಂಡಿದ್ದ ಶ್ರೀಯುತರಿಗೆ ವಿನೋದ ಕೇವಲ ಪ್ರವೃತ್ತಿಯಾಗಿದ್ದರೂ ಅದಕ್ಕಾಗಿ ನಿಷ್ಠೆಯಿಂದ ದುಡಿದವರು. ತಮ್ಮ ಸ್ವಂತ ಸ್ವತಂತ್ರ ಮುದ್ರಣಾಲಯದ ಮೂಲಕ, 'ವಿನೋದ' ಪ್ರಕಾಶನದಿಂದ ಮೂರು ವ್ಯಂಗ್ಯಚಿತ್ರ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಪ್ರತಿವರ್ಷ ವಿನೋದ ವಿಶೇಷಾಂಕಗಳನ್ನೂ ಪ್ರಕಟಿಸುತ್ತಿದ್ದಾರೆ. ಜಿ. ನಾರಾಯಣ ಅವರ ಪುತ್ರ ಎನ್. ರಾಘುವೇಂದ್ರ ಪ್ರಸ್ತುತ ವಿನೋದದ ಸಾರಥ್ಯ ವಹಿಸಿದ್ದಾರೆ.[೧೬]

ಸ್ವಾತಂತ್ರ್ಯಾನಂತರ ಕನ್ನಡದಲ್ಲಿ ಸಾಕಷ್ಟು ಪತ್ರಿಕೆಗಳು ಹುಟ್ಟಿಕೊಂಡವು. ತಾಯಿನಾಡು, ವಿಶ್ವಕರ್ನಾಟಕ ದಿನಪತ್ರಿಕೆಗಳು, ಪ್ರಜಾಮತ, ಕರ್ಮವೀರ, ಜನಪ್ರಗತಿ ವಾರ ಪತ್ರಿಕೆಗಳು, ಕಥಾವಳಿ, ಉಷಾ, ಕಥೆಗಾರ, ಕಥಾಂಜಲಿ, ಚಿತ್ರಗುಪ್ತ ಮಾಸಪತ್ರಿಕೆಗಳು ಪ್ರಾರಂಭವಾದವು. ಆದರೆ ವ್ಯಂಗ್ಯಚಿತ್ರಗಳ ಗಂಭೀರ ಬೆಳವಣಿಗೆಗೆ ಈ ಅವಧಿಯಲ್ಲಿ ಕಲಾವಿದರೂ ಮನಸ್ಸು ಮಾಡಲಿಲ್ಲ. ಪತ್ರಿಕೆಗಳೂ ಹೇಳಿಕೊಳ್ಳುವಂಥ ಆಸಕ್ತಿ ತೋರಲಿಲ್ಲ. ಆದರೂ ಈ ಅವಧಿಯಲ್ಲಿ ಎಂ.ಎಸ್. ವಿಠ್ಠಲ್, ಅಶ್ವತ್ಥ, ಪಿ.ಆರ್. ತಿಪ್ಪೇಸ್ವಾಮಿ, ಎಸ್. ಶ್ರೀನಿವಾಸಲು,

---

೧೫. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೧೬

೧೬. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೧೯

ಎಸ್.ಟಿ.ವಿ. ರಾವ್ ಮೊದಲಾದ ಕಲಾವಿದರು ವ್ಯಂಗ್ಯಚಿತ್ರಗಳನ್ನು ಬರೆದರು. ಈ ಮಧ್ಯೆ ತಾಯಿನಾಡು ಸೋದರ ಪತ್ರಿಕೆಗಳಾದ ಗೋಕುಲ ವಾರ ಪತ್ರಿಕೆ ಮತ್ತು ಕೈಲಾಸ ಮಾಸಪತ್ರಿಕೆಗಳೂ ಪ್ರಾರಂಭವಾದವು. ಈ ಪತ್ರಿಕಾ ಬಳಗದ ಮುಖ್ಯ ಕಲಾವಿದರಾಗಿದ್ದವರು ಎಂ.ಟಿ.ವಿ. ಆಚಾರ್ಯ ಎಂದು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು.

೧೯೬೫ರ ಅನಂತರ ಸುಧಾ ವಾರಪತ್ರಿಕೆ, ಮಯೂರ ಮತ್ತು ಅನಂತರದ ಕಾಲದಲ್ಲಿ ತುಷಾರ ಮಾಸಪತ್ರಿಕೆಗಳು ಪ್ರಾರಂಭವಾದವು. ಕರ್ನಾಟಕದಲ್ಲಿ ವ್ಯಂಗ್ಯಚಿತ್ರಕಾರರ ಬೆಳವಣಿಗೆಗೆ ಈ ಪತ್ರಿಕಾಬಳಗ ನೀಡಿರುವ ಕಾಣಿಕೆ ಅನನ್ಯ. ಇದೇ ಪ್ರಥಮಬಾರಿಗೆ ಪ್ರತಿ ಸಂಚಿಕೆಯಲ್ಲಿಯೂ ಪೂರ್ಣ ಪುಟದ ವ್ಯಂಗ್ಯಚಿತ್ರಮಾಲಿಕೆಗಳು ಪ್ರಕಟವಾಗತೊಡಗಿದವು. ಈ ಹೊಸ ಸಂಚಲನವನ್ನು ನೆನೆಯುವಾಗ ನಾವು ಸುಧಾ ಪತ್ರಿಕೆಯ ಇ.ಆರ್. ಸೇತೂರಾಂ, ಎಂ.ಬಿ. ಸಿಂಗ್ ಮತ್ತು ಪ್ರಜಾವಾಣಿಯ ಟೀಎಸ್ಸಾರ್ ಅವರನ್ನು ನೆನೆಯಲೇ ಬೇಕಾಗುತ್ತದೆ. ಇವರ ಗುಣನಿಷ್ಠುರ ಉತ್ತೇಜನದಿಂದಾಗಿ ಕನ್ನಡದ ಓದುಗರು ಒಳ್ಳೊಳ್ಳೆಯ ವ್ಯಂಗ್ಯಚಿತ್ರ ನೋಡುವಂತಾಯಿತು. ಅಂತೆಯೇ ವ್ಯಂಗ್ಯಚಿತ್ರಕಾರರಿಗೂ ಆತ್ಮ ವಿಮರ್ಶೆ ಹಾಗೂ ಬೆಳವಣಿಗೆಗೆ ನೇರ ಅವಕಾಶ ಸಿಕ್ಕಿತು. ಜನಪ್ರಗತಿ, ಮಲ್ಲಿಗೆ ಸಂಪಾದಕರಾಗಿದ್ದ ಸ್ವತಃ ಹಾಸ್ಯ ಸಾಹಿತಿಯಾದ ನಾಡಿಗೇರ ಕೃಷ್ಣರಾಯರು ವ್ಯಂಗ್ಯಚಿತ್ರಕಾರರಿಗೆ ನೀಡಿದ ಪ್ರೋತ್ಸಾಹ ಗಮನಾರ್ಹ. ಪರಿಣಾಮವಾಗಿ ಕನ್ನಡದ ಎಲ್ಲ ಪತ್ರಿಕೆಗಳೂ ಧಾರಾಳವಾಗಿ ವ್ಯಂಗ್ಯಚಿತ್ರಗಳನ್ನು ಪ್ರಕಟಿಸಲು ಪ್ರಾರಂಭಿಸಿದವು.

ಆ ವೇಳೆಗಾಗಲೇ ಕನ್ನಡಿಗರ ಮನೆಮಾತಾಗಿದ್ದ ಎಸ್.ಕೆ. ನಾಡಿಗ್ ತಮ್ಮ ಸರಸ ಸುಂದರ ಸಾಮಾಜಿಕ ಹಾಸ್ಯಚಿತ್ರಗಳಿಂದ ಇನ್ನಷ್ಟು ಜನಪ್ರಿಯತೆ ಗಳಿಸಿಕೊಂಡರ. ಎಸ್.ಕೆ. ನಾಡಿಗ್ ಅವರೂ ರಾಶಿ ಅವರ 'ಕೊರವಂಜಿ ನಿಕೇತನ'ದ ಕೊಡುಗೆ. ೧೯೪೮ರಲ್ಲಿ ನಾಡಿಗ್ ಅವರ ಮೊದಲನೆಯ ವ್ಯಂಗ್ಯಚಿತ್ರ ಪ್ರಕಟಿಸಿದ್ದು ರಾಶಿ. ಅನಂತರ ನಾಡಿಗ್ ಅವರು ನಾಡಿನ ಹವ್ಯಾಸಿ ವ್ಯಂಗ್ಯಚಿತ್ರಕಾರರಾಗಿ ಪ್ರಸಿದ್ಧಿ ಪಡೆದರು. ಈವರೆಗೆ ಸುಮಾರು ೨೫ ಸಾವಿರಕ್ಕೂ ಹೆಚ್ಚು ಚಿತ್ರ ರಚಿಸಿದ್ದಾರೆ. ನಾಡಿನ ಎಲ್ಲ ಪತ್ರಿಕೆಗಳಿಗೆ ಬೇಕಾದವರಾಗಿಬಿಟ್ಟಿರುವ ನಾಡಿಗರಿಗೆ 'ಕುಟುಂಬ'ವೇ ಅವರ ಚಿತ್ರಗಳಿಗೆ ಮೆಚ್ಚಿನ ವಸ್ತು. ಮನೆ, ಮಡದಿ, ಮಕ್ಕಳ ಬಗ್ಗೆ ಅವರಷ್ಟು ಆಪ್ಯಾಯಮಾನವಾಗಿ ಬರೆದ ಇನ್ನೊಬ್ಬ ವ್ಯಂಗ್ಯಚಿತ್ರಕಾರರಿಲ್ಲ. ಚಿತ್ರ ನೋಡಿದ ಕೂಡಲೇ ಇದು ನಾಡಿಗ್ ಬರೆದದ್ದು ಎಂದು ಥಳಾಗಿ ಹೇಳುವಷ್ಟು ನಾಡಿಗತನ ಅವರ ಚಿತ್ರಗಳಲ್ಲಿದೆ. ನಾಡಿಗ್ ಅವರ ಚಿತ್ರಗಳಿಂದ ಪ್ರಭಾವಿತರಾಗಿ, ಪ್ರೇರಿತರಾಗಿ ಹತ್ತಾರು ಜನ ಕಲಾವಿದರು ಬೆಳಕಿಗೆ ಬಂದಿದ್ದಾರೆ. (ನಾಡಿಗ್ ಅವರು ಬರೆದ ಕಾದಂಬರಿ ಕನ್ನೇಶ್ವರ ರಾಮ ಚಲನಚಿತ್ರವಾಗಿಯೂ ತೆರೆಕಂಡಿದೆ.)[೧೭]

ವಿವಿಧ ಸಾಧ್ಯತೆಗಳನ್ನು ಅರಸುತ್ತಾ ಚಿತ್ರರಚಿಸಿ ತಮ್ಮ ಪ್ರಯೋಗಶೀಲತೆ ಮೆರೆದ ಕೆ.ಆರ್. ಸ್ವಾಮಿ ಹೊಸ ಹೊಸ ವಿಷಯ ವೈವಿಧ್ಯದಿಂದ ಗಮನ ಸೆಳೆದರು. ಬಹುಕಾಲ ಪ್ರಜಾವಾಣಿಯಲ್ಲಿ 'ಚಿನಕುರಳಿ' ಬರೆದ ಹುಬ್ಳೀಕರ್ ಎರಡು ಮೂರು ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸತತವಾಗಿ ಸಾಧನೆ ಮಾಡಿದರೂ ತಮ್ಮನ್ನು ತಾವು ವ್ಯಂಗ್ಯ ಚಿತ್ರಕಾರರೆಂದೇ ಗುರುತಿಸಿಕೊಳ್ಳಲು ಬಯಸಿದರು. ಅದರಲ್ಲಿ ಯಶಸ್ವಿಯಾದರು.

---

೧೭. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೧೯

ಪ್ರಜಾಮತದಲ್ಲಿ ಪೂರ್ಣಪುಟದಲ್ಲಿ 'ಚಿಂಗಾರಿ'ಯನ್ನು ಅನಾವರಣಗೊಳಿಸಿದ ವ್ಯಂಗ್ಯಚಿತ್ರಕಾರ ಜಿ.ವೈ. ಹುಬ್ಳೀಕರ್ ವಾಸ್ತವವಾಗಿ ಅಭಿಜಾತ ಕಲಾವಿದ. ಅವರ ರೇಖಾಚಿತ್ರದಲ್ಲಿ ಕಾಣುತ್ತಿದ್ದ ಸ್ವೋಪಜ್ಞತೆಯು ವ್ಯಂಗ್ಯಚಿತ್ರದಲ್ಲಿಯೂ ಬಿಂಬಿಸದಂತೆ ಎಚ್ಚರವಹಿಸುತ್ತಿದ್ದ ಅವರ ಚಿತ್ರಗಳ ಜೀವಾಳವೇ ರೇಖೆಗಳು. ಬರ್ಲಿನ್‌ನಲ್ಲಿ ನಡೆದ 'ಕಾರ್ಟೂನ್- ೧೯೭೭' ಪ್ರದರ್ಶನದಲ್ಲಿ ಅವರ ಚಿತ್ರಗಳು ಪ್ರದರ್ಶನಗೊಂಡಿದ್ದವು. ಮೂರು ಬಾರಿ ರಾಜ್ಯ ಅಕಾಡೆಮಿ ಬಹುಮಾನಕ್ಕೂ ಅವರು ಪಾತ್ರರಾಗಿದ್ದಾರೆ. ಹುಬ್ಳೀಕರ್ ನಂತರ ಚಿನಕುರಳಿ ಪ್ರವೇಶಿಸಿದ ಪ್ರೇಂ ಕುಮಾರ್ ಆ ಚೌಕಟ್ಟಿನಿಂದ ಅಪರೂಪಕ್ಕೆ ಆಗಾಗ ಹೊರಬರುತ್ತಿದ್ದರು, ಅಷ್ಟೇ.[೧೮]

ಈ ಹಿರಿಯ ಕಲಾವಿದರುಗಳಿಂದ ಸ್ಫೂರ್ತಿ ಪಡೆದ ಒಂದು ದಂಡೆ ವ್ಯಂಗ್ಯಚಿತ್ರರಂಗ ಪ್ರವೇಶಿಸಿದರೂ ಹೆಚ್ಚಿನ ಗಟ್ಟಿ ಕಾಳುಗಳು ಉಳಿಯಲಿಲ್ಲ. ವಿ.ಆರ್.ಸಿ. ಶೇಖರ್, ಸುಬ್ರಮಣ್ಯ, ಗೋಪಾಲ, ಹು.ಲ. ನಟರಾಜ್ ಶ್ರೀಧರ್, ಶ್ರೀಪಡ್ರೆ, ಎಚ್.ಬಿ. ಮಂಜುನಾಥ್, ಆನಂದ್ ಮುಂತಾದವರು ವ್ಯಂಗಚಿತ್ರಕಲೆಯನ್ನು ಮುಂದುವರೆಸಿದರು. ಈ ಅವಧಿಯಲ್ಲಿಯೇ ಬೆಳಕಿಗೆ ಬಂದ ಮೂವರು ಪ್ರತಿಭಾವಂತರು ವ್ಯಂಗ್ಯಚಿತ್ರಕಲೆಯನ್ನು ಮುಂದುವರೆಸಿದರು. ಈ ಅವಧಿಯಲ್ಲಿಯೇ ಬೆಳಕಿಗೆ ಬಂದ ಮೂವರು ಪ್ರತಿಭಾವಂತರು ಗುಜ್ಜಾರಪ್ಪ, ಹರಿಶ್ಚಂದ್ರ ಶೆಟ್ಟಿ ಮತ್ತು ಪ್ರಕಾಸ್ ಶೆಟ್ಟಿ ಮುಂದೆ ಬಹುದೊಡ್ಡ ಸಾಧನೆ ಮಾಡಿದರು. ಕೆಲವೇ ದಿನ ಮಿಂಚಿದ ಪ್ರಸನ್ನ, ರಾವ್‌ಬೈಲ್ ಅವರುಗಳು ಭರವಸೆ ಹುಟ್ಟಿಸಿದ್ದರು. ಉದಯವಾಣಿಯ ಗಣಪತಿಭಟ್ ಎಲ್ಲ ವ್ಯಂಗ್ಯಚಿತ್ರಕಾರರುಗಳ ಬಗ್ಗೆ ಸುದೀರ್ಘ ಲೇಖನ ಮಾಲೆ ಬರೆದಿದ್ದು ಹಾಗೂ ಉಮೇಶ್ ಕುಲಕರ್ಣಿ ಮತ್ತು ಮಧುಸೂದನರೆಡ್ಡಿ ದೂರದರ್ಶನಕ್ಕಾಗಿ ಇತ್ತೀಚೆಗೆ ವ್ಯಂಗ್ಯ ಚಿತ್ರ ಧಾರಾವಾಹಿ ನಿರ್ಮಿಸಿ ಪರಿಚಯ ಮಾಡಿಸಿದ್ದು ಉತ್ತೇಜನಾತ್ಮಕ ಅಂಶಗಳಾಗಿವೆ.

ಮಾರಿಯರೋ ಡಿ. ಮಿರಾಂಡಾ ಅವರು ಸಂಚೇತಕರಾಗಿದ್ದು, ಅಶೋಕ್ ಖೇಣಿಯವರು ಇಂಡಿಯನ್ ಇನ್ಸ್‌ಸ್ಟಿಟ್ಯೂಟ್ ಆಫ್ ಕಾರ್ಟೂನಿಸ್ಟ್ ಸಂಸ್ಥೆಯ ಗೌರವಾಧ್ಯಕ್ಷರಾಗಿದ್ದಾರೆ. ರಾಷ್ಟ್ರೀಯ ಸಲಹಾ ಸಮಿತಿಯಲ್ಲಿ ರಾಷ್ಟ್ರದ ಪ್ರತಿಷ್ಠಿತ ವ್ಯಂಗ್ಯಚಿತ್ರಕಾರರುಗಳಾದ ಎಸ್. ಸುಕುಮಾರನ್, ಇಜಯ್ ಎನ್.ಸೇಠ್, ಇ.ಪಿ. ಉನ್ನಿ, ಕೇಶವ್, ಸುರೇಶ್ ಸಾವಂತ್, ಸಿ.ಹೆಚ್. ವೆಂಕಟೇಶ್, ಶ್ಯಾಂ ಮೋಹನ್, ಮೋಹನ್ ಚಂದ್ರನ್ ಮತ್ತು ಪೀಟರ್ ಅವರುಗಳಿದ್ದು ಕರ್ನಾಟಕದ ನೆಲದಿಂದ ಇಂಥದೊಂದು ರಾಷ್ಟ್ರೀಯ ಸಂಘಟನೆ ಕಾರ್ಯ ತತ್ಪರವಾಗಿರವುದು ಅಭಿನಂದನೀಯ ಸಂಗತಿಯಾಗಿದೆ.

ಕನ್ನಡದವರಾಗಿದ್ದು ಹೊರರಾಜ್ಯಗಳಲ್ಲಿ ಕೆಲಸ ಮಾಡಿದ ಕೆಲವು ಕಲಾವಿದರನ್ನು ಇಲ್ಲಿ ಸ್ಮರಿಸಿಕೊಳ್ಳಬೇಕಾಗಿದೆ. ಫ್ರೀಪ್ರೆಸ್ ಜರ್ನಲ್‌ನಲ್ಲಿ ದುಡಿದು ಡಿ.ಜಿ. ಕುಲಕರ್ಣಿ, ತಮಿಳಿನ ಕಲ್ಕಿ ಪತ್ರಿಕೆಯಲ್ಲಿ ಕೆಲಸಮಾಡಿ, ಅನಂತ ನವಭಾರತ ಮತ್ತು ಉದಯವಾಣಿಗಳಿಗೆ ಕೆಲಸ ಮಾಡಿದ ಪುತ್ತೂರಿನ ಅಡ್ವೊಕೇಟ್ ರಾಮಕೃಷ್ಣ (ರಘುಂ). ನವದೆಹಲಿಯ ರಂಗಾ, ಮುಂಬಯಿನಿಂದ ಬರೆಯುತ್ತಿದ್ದ ರಾವ್‌ಬೈಲ್, ಕನ್ನಡಪ್ರಭ ಪತ್ರಿಕೆಯ ಟಿ.ಕೆ. ರಾವ್, ಮದ್ರಾಸಿನಿಂದ ಬರೆಯುತ್ತಿದ್ದ ಎ.ಜಿ. ರಾಘುವನ್ (ರಾಗ್). ಡಿವಿಜಿಯವರ ಪುತ್ರ

೧೮. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೨೧

ಡಾ|| ಬಿ.ಜಿ.ಎಲ್. ಸ್ವಾಮಿ ಇವರೆಲ್ಲರ ಪರಿಶ್ರಮ ವ್ಯಂಗ್ಯಚಿತ್ರಗಾರರ ಕೀರ್ತಿ ಬೆಳೆಯಲು ಕಾರಣವಾಗಿದೆ. ಈ ಸಂದರ್ಭಗಳಲ್ಲಿ ನಾವು ಸ್ಮರಿಸಿಕೊಳ್ಳಲೇಬೇಕಾದ ಮುಖ್ಯ ಹೆಸರು ಶಿಂಗಣ್ಣ ಅರ್ಥಾತ್ ಕನ್ನೆಪ್ಪಾಡಿ ರಾಮಕೃಷ್ಣ. ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನ ರಾಮಕೃಷ್ಣ ಸ್ವಯಂಕೃಷಿಯಿಂದ ವ್ಯಂಗ್ಯಚಿತ್ರಕಲೆಯಲ್ಲಿ ಔನ್ನತ್ಯ ಸಾಧಿಸಿದವರು. ಬನಾರಸ್‌ನಲ್ಲಿ ಓದುತ್ತಿದ್ದಾಗ ಅವರ ಮೊದಲ ವ್ಯಂಗ್ಯಚಿತ್ರ ೧೯೪೩ರಲ್ಲಿ ಕಲ್ಕತ್ತಾದ ಓರಿಯಂಟ್ ಇಲಸ್ಟ್ರೇಟೆಡ್ ವೀಕ್ಲಿಯಲ್ಲಿ ಪ್ರಕಟವಾಯಿತು. ಬನಾರಸ್ಸಿನ 'ಆಜ್ ಪತ್ರಿಕೆಯಲ್ಲಿ ಎರಡು ವರ್ಷ ಕೆಲಸ ಮಾಡಿದ ಶಾಸ್ತ್ರಿ (ಇದು ಆಗಿನ ಅವರ ಚಿತ್ರನಾಮ), ಡಾ|| ಎಸ್. ರಾಧಾಕೃಷ್ಣನ್ ಅವರ ಪ್ರೇರಣೆಯಂತೆ ಮದ್ರಾಸಿನ 'ಕಲ್ಕಿ' ಪತ್ರಿಕೆ ಸೇರಿದರು. ಸಂಗೀತ ಸಾಮ್ರಾಜ್ಞಿ ಎಂ.ಎಸ್. ಸುಬ್ಬುಲಕ್ಷ್ಮಿ ಮತ್ತು ಅವರ ಪತಿ ಎಂ. ಸದಾಶಿವಂ ಅವರ ಒಡೆತನದ ಕಲ್ಕಿಯನ್ನು ೧೯೪೫ರಲ್ಲಿ ಸೇರಿದ ರಾಮಕೃಷ್ಣ ೧೯೫೫ರವರೆಗೆ ದುಡಿದು ೧೯೫೮ರಲ್ಲಿ ನವಭಾರತ ಸೇರಿ ಶಿಂಗಣ್ಣನನ್ನು ಹುಟ್ಟುಹಾಕಿದರು. ನಿರಂತರ ೧೪ ವರ್ಷ ಅಲ್ಲಿ ಕೆಲಸ ಮಾಡಿದ ರಾಮಕೃಷ್ಣರು ಉದಯವಾಣಿ ಸೇರಿ, ಮುಂದೆ ರಚಿಸಿದರು. ರಾಜಕೀಯ ವ್ಯಂಗ್ಯಚಿತ್ರಗಳಿಗಾಗಿ ಎರಡು ಬಾರಿ ಸಿಲೋನ್ ಹಾಗೂ ಭಾರತದಲ್ಲಿ ಆ ಚಿತ್ರಗಳಿದ್ದ ಸಂಚಿಕೆಗಳನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿತ್ತು. ಒಟ್ಟು ಐದು ಭಾಷೆಯ ಪತ್ರಿಕೆಗಳಲ್ಲಿ ವ್ಯಂಗ್ಯಚಿತ್ರ ಬರೆದ ಕೀರ್ತಿ ಅವರದು.[೧೯]

ಇತ್ತೀಚಿನ ದಿನಗಳಲ್ಲಿ ಬೆಳಕಿಗೆ ಬಂದ ಪಿ. ಮಹಮದ್, ಪಂಜು ಗಂಗೊಳ್ಳಿ, ಮಕಾಳಿ, ಹಾದಿಮನಿ, ಯತೀಶ್, ಭಾವು ಪತ್ತಾರ್ ಉತ್ತಮ ರೇಖಾ ಸಾಮರ್ಥ್ಯದಿಂದ ಭರವಸೆಯ ಕಲಾವಿದರಾಗಿದ್ದಾರೆ. ಪತ್ರಿಕಾ ಕಲಾವಿದರಾಗಿದ್ದು ಬೇಕಾದಷ್ಟು ಮತ್ತು ರಾ. ಸೂರಿಯವರ ಕೈಚಳಕವನ್ನು ಮರೆಯುವಂತಿಲ್ಲ.

ತಮ್ಮ ವಿಶಿಷ್ಟ ರೇಖೆ ಮತ್ತು ವಿಶೇಷ ನಿರೂಪಣೆಯಿಂದ ಅಥವಾ ನಿರೂಪಣೆಯೇ ಇಲ್ಲದೆ ಪರಿಣಾಮಾತ್ಮಕ ವ್ಯಂಗ್ಯಚಿತ್ರ ರಚಿಸಿದ ಪೊನ್ನಪ್ಪ, ಹೆಚ್ಚಿನ ಭರವಸೆ ಹುಟ್ಟಿಸುತ್ತಿದ್ದಂತೆಯೇ ವ್ಯಂಗ್ಯಚಿತ್ರ ಬರೆಯಲಾರಂಭಿಸಿದ ಸ್ವಲ್ಪನೇ ಅವಧಿಯಲ್ಲಿ ಲಘುಹಾಸ್ಯ ಮತ್ತು ಲಘುರೇಖೆಗಳ ಮೂಲಕ ಗಮನ ಸೆಳೆದ ತುಮಕೂರಿನ ಪ್ರಸನ್ನ ಮುಂದೆ ಚಿತ್ರ ರಚನೆ ನಿಲ್ಲಿಸಿದರೂ ಅವರ ಚಿತ್ರಗಳು ಬಹುಕಾಲ ನೆನಪಿನಲ್ಲಿದ್ದವು. ಈ ಸಾಲಿಗೆ ಅಶ್ವತ್ಥ ಮತ್ತು ರಾವ್ ಬೈಲ್ ಅವರ ಚಿತ್ರಗಳೂ ಸೇರುತ್ತವೆ.[೨೦]

ವ್ಯಂಗ್ಯಚಿತ್ರಗಳ ಬೆಳವಣಿಗೆಯ ಬಗ್ಗೆ ಬರೆಯುವಾಗ ಕನ್ನಡದ ಹಾಸ್ಯಲೇಖನಗಳಿಗೆ ಆಗಾಗ ವ್ಯಂಗ್ಯಚಿತ್ರ ರಚಿಸುತ್ತಿದ್ದ ಕಲಾವಿದರ ಪ್ರಯತ್ನವನ್ನು ಮರೆಯುವಂತಿಲ್ಲ. ಪ್ರಸಿದ್ಧ ಕಲಾವಿದರಾದ ಚಂದ್ರನಾಥ್, ರಾ.ಸೂರಿ, ಪ.ಸ. ಕುಮಾರ್ ಮತ್ತು ಹುಬ್ಳೀಕರ್ ಅವರ ವಿಭಿನ್ನ ಚಿತ್ರರಚನಾ ಶೈಲಿ ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ. ಈ ನಿಟ್ಟಿನಲ್ಲಿ ಇನ್ನೂ ಹಲವಾರು ಕಲಾವಿದರು ಸೇರಿದ್ದು, ಉದಯವಾಣಿ ಜೇಮ್ಸ್‌ವಾಜ್ ಸಹ ಒಬ್ಬರಾಗಿದ್ದಾರೆ. ಇತ್ತೀಚಿನ ಜಿ.ಎಸ್. ನಾಗನಾಥ್ ಮತ್ತು ಯಲ್ಲಪ್ಪ ಅವರ ರೇಖೆಗಳೂ ಗಮನ ಸೆಳೆಯುತ್ತಿವೆ.

ಕನ್ನಡ ವ್ಯಂಗ್ಯಚಿತ್ರರಂಗಕ್ಕೆ ಹೆಚ್ಚಿನ ಸಂಖ್ಯೆಯ ಕಲಾವಿದರ ಕೊಡುಗೆ ನೀಡಿದ ಎಂ.ಟಿ.ವಿ. ಆಚಾರ್ಯ ದಂಪತಿಗಳ ಒತ್ತಾಸೆಯನ್ನು, ಶ್ರಮವನ್ನು ನಾವು ಕೃತಜ್ಞತೆಯಿಂದ ಸ್ಮರಿಸಬೇಕು. ಅವರ ಅಂಚೆಪಾಠಗಳಿಂದ ಪ್ರೇರಣೆ ಪಡೆದವರು ನೂರಾರು ಮಂದಿ ಇದ್ದಾರೆ.

---

೧೯. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೨೨

೨೦. ಎಂ.ಎಚ್. ಕೃಷ್ಣಯ್ಯ : ಕರ್ನಾಟಕ ಕಲಾ ದರ್ಶನ, ಸಂಪುಟ-೧, ; ಪುಟ ಸಂಖ್ಯೆ-೨೨೦

## ಕರ್ನಾಟಕ ವ್ಯಂಗ್ಯ ಚಿತ್ರಕಲೆಯ ಗ್ಯಾಲರಿ

ಕಲೆಯ ಜೀವಂತವಾಗಿರುವ ಸುಂದರವಾದೊಂದು ಔಷಧಿ ಸಸ್ಯದಂತೆ, ಅದರ ಬೀಜವು ಅದರಿಂದಲೇ ಪಡೆದದ್ದು. ಬೀಜವು ಕಲಾವಿದನ ಮನವೆಂಬ ಕ್ಷೇತ್ರದಲ್ಲಿ ಶಾಂತ ಸ್ಫೂರ್ತಿ ಒದಗಿದಾಗ, ಜ್ಞಾನ ಪೋಷಣೆ ದೊರೆತಾಗ, ಅಂತರ್ದೃಷ್ಟಿಯ ಪ್ರಕಾಶ ಬಿದ್ದಾಗ, ಅನುಕೂಲದ ವಾತಾವರಣ ದೊರೆತಾಗ, ಕೌಶಲ್ಯದಿಂದಾಗಿ ಮತ್ತು ಹುದುಗಿದ ಅನುಭವದಿಂದ ಮೊಳಕೆ ಚಿಗುರೊಡೆದು ಗಿಡವಾಗಿ ಬೇರು ಬಿಟ್ಟು, ರೆಂಬೆ ಕೊಂಬೆ ತಾಳಿ ವಿಶಾಲವೃಕ್ಷವಾಗುತ್ತದೆ.[೨೧]

ಭಾರತೀಯ ಲಲಿತ ಕಲೆಗಳ ಬೆಳವಣಿಗೆಯು ವ್ಯಕ್ತಿ ಸಮಾಜ ಮತ್ತು ಧರ್ಮ ಹೀಗೆ ಪ್ರಮುಖವಾಗಿ ಸಾಗಿದೆ. ತಮ್ಮ ಇಷ್ಟ ದೇವತೆಗಳಿಗೆ ಅರ್ಪಿತವಾಗಬೇಕೆಂಬ ಮನೋಭಾವದಿಂದಲೇ ಮಂದಿರಗಳು, ಬೌದ್ಧವಿಹಾರಗಳು, ಜೈನ ಬಸದಿಗಳು, ಮೂರ್ತಿ ಮತ್ತು ಫಲಕಗಳ ಶಿಲ್ಪಗಳೂ, ಚಿತ್ರಗಳೂ ಕಲಾವಿದರಿಂದ ಸೃಷ್ಟಿಯಾಗಿದೆ. ಇದರಿಂದ ಸಮಾಜಕ್ಕೆ ಮತ್ತು ತಮಗೆ ಆನಂದವೂ ಒದಗಲೆಂಬ ಇರಾದೆಯಿದೆ. ಗೋಪಿಕೃಷ್ಣರ ಲಾಸನೃತ್ಯ, ರಾಮನಾಮ ಸಂಕೀರ್ತನೆ, ಬೋಧಿಸತ್ವನ ವೈರಾಗ್ಯದ ಚಿತ್ರ, ದುರ್ಗೆ, ಗಣೇಶ ಮೊದಲಾದ ದೇವ ದೇವಿಯರ ಪ್ರಸನ್ನ ಮೂರ್ತಿಗಳು ವಾಸ್ತವಾತೀತವಾದ ಪಾರಮಾರ್ಥಿಕ ತತ್ತ್ವಗಳನ್ನು ನಿರೂಪಿಸಲು ಹಾಗೆಯೇ ಧಾರ್ಮಿಕ ಭಾವವನ್ನು ಜಾಗೃತಗೊಳಿಸಲೂ ಸೃಜಿತವಾಗಿದೆ. ಲಲಿತವಾದ ಹೂವು, ಪ್ರಕೃತಿಯ ದೃಶ್ಯ, ಸುಂದರಿಯರು, ಋತುಗಳು ಇಂತಹವುಗಳ ಚೆಲುವನ್ನು ಐರೋಪ್ಯ ಕಲಾವಿದರಂತೆಯೇ ಗ್ರಹಿಸುತ್ತಿದ್ದ ಭಾರತೀಯ ಕಲಾವಿದನು ಅವರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿದ್ದಾನೆ. ಇಂದಿದ್ದು ನಾಳೆ ನಶಿಸಿ ಹೋಗುವ ಇವೇ ಇಷ್ಟು ಸುಂದರವಿದ್ದರೆ, ಇವುಗಳನ್ನು ಸೃಷ್ಟಿಸಿದ ಶಕ್ತಿಯು ಬಹು ಸಮರ್ಥವಾಗಿದೆ ಮತ್ತು ದೈವದತ್ತವಾದ ಶಕ್ತಿಯನ್ನು ಅಲ್ಪ ವಿಷಯಾರ್ಜನೆಗೆ ವಿನಿಯೋಗಿಸುವುದಕ್ಕಿಂತ ಮಹತ್ವದ ಆರ್ಜನೆಗೆ ಉಪಯೋಗಿಸುವುದು ಶ್ರೇಷ್ಠವೆಂದು ಭಾರತೀಯ ಕಲಾವಿದರು ಅಲ್ಲಲ್ಲಿ ಅತಿಮಾನುಷ ಕಲ್ಪನೆಗೆ ತಮ್ಮ ಅಡಿಯಲ್ಲಿ ಸ್ಥಾನಕೊಟ್ಟರು, ಸಾಮಾನ್ಯ ಮಾನವನಿಗೆ ಎರಡು ಕಣ್ಣುಗಳಿದ್ದರೆ, ಶಿವನಿಗೆ ಮೂರು ಕಣ್ಣುಗಳು. ವಿಷ್ಣುವು ಚತುರ್ಭುಜ, ದುಗೆ ಅಷ್ಟಪ್ರಹರಣಾಯರೆ ಇಂತಹ ಕಲ್ಪನೆ ಮಾಡಿದಾಗ ಕಲಾಕೃತಿಗಳಲ್ಲಿ ಗೌರವವನ್ನು ಮೂಡಿಸುವಂತ ತಂತ್ರ ನಮ್ಮ ಕಲಾವಿದರಿಗೆ ಒದಗಿಬಂದಿದೆ.[೨೨]

ನಮ್ಮ ಸಾಂಸ್ಕೃತಿಕ ರೀತಿ ನೀತಿಗಳಿಗೂ ನಮ್ಮ ಕಲೆಗೂ ಏನು ಸಂಬಂಧವಿದೆ ಎಂದು ಕೇಳುವವರಿದ್ದಾರೆ. ಅವರು ಆ ಸಂಬಂಧವು ಬಹಳ ಗಾಢವಾಗಿದೆ ಎಂಬುದನ್ನು ತಿಳಿದಿಲ್ಲ. ಕಲೆಯೊಂದು ಜಾನಪದ ಪ್ರಕಾರವಾಗಿ ಹುಟ್ಟಿರುವಾಗ ಜಾನಪದ ಸಂಸ್ಕೃತಿಯನ್ನು ಹಚ್ಚಿಕೊಂಡಿರುತ್ತದೆ. ಹಾಗೇ ನೋಡಿದರೆ ರಾಜಕೀಯದ ಏಳುಬೀಳು ಸ್ವಲ್ಪ ಮಟ್ಟಿಗೆ ನಮ್ಮ ಸಂಸ್ಕೃತಿಯ ಹಿರಿಮೆಯನ್ನು ಹೆಚ್ಚೋ ಕಮ್ಮಿಯೋ ಬಹು ಪ್ರಾಶಸ್ತ್ಯಕ್ಕೆ ತಂದು ಹಾಕಿದರು. ರಾಜಕೀಯ ಮತ್ತು ಆರ್ಥಿಕ ಜೀವನವನ್ನು ನಮ್ಮ ಕಲೆಯು ಅನುಸರಿಸುವುದಿಲ್ಲ. ಒಟ್ಟಿನಲ್ಲಿ ದೇಶದ ಹಿರಿಮೆ, ಸುಖಗಳು ಆರ್ಥಿಕ ಮತ್ತು ರಾಜಕೀಯ ಜೀವನಗಳನ್ನು ಹೊಂದಿಕೊಂಡಂಷ್ಟೇ ಧಾರ್ಮಿಕ ಮತ್ತು ಸಾಂಸ್ಕೃತಿಕ

---

೨೧. ವಾಸುದೇವ ಕಾಣೆಮಾರ್ : ಕಲಾ ಪ್ರಕಾರಗಳು ; ಪುಟ ಸಂಖ್ಯೆ-೨೯

೨೨. ವಾಸುದೇವ ಕಾಣೆಮಾರ್: ಕಲಾ ಪ್ರಕಾರಗಳು ; ಪುಟ ಸಂಖ್ಯೆ-೮

ಕಲಾಜೀವನಗಳನ್ನೂ ಹೊಂದಿಕೊಂಡಿವೆ. ಆದರೆ ಇನ್ನೂ ಹೆಚ್ಚಾಗಿ ಎಂದೂ ಹೇಳಬಹುದು. ನಮ್ಮದು ಲೌಕಿಕ ಸಂಸಾರವಿರುವುದರಿಂದ ರಾಜಕೀಯ ಮತ್ತು ಆರ್ಥಿಕ ಉನ್ನತಿಗಳು ಲೌಕಿಕವಾಗಿರುವಾಗ ಸಾಂಸ್ಕೃತಿಕ ಮತ್ತು ಧಾರ್ಮಿಕ ಉನ್ನತಿಯು ಸ್ವಲ್ಪ ಪಾರಮಾರ್ಥಿಕವಾಗಿರುತ್ತದೆ. ಹೀಗೆ ಕಲೆಗಳಲ್ಲಿ ಅಲೌಕಿಕ ಸತ್ತ್ವವೂ ಇರುತ್ತದೆ.

ಕಲಾವಿದನು ತೇಜಸ್ವಿಯೂ ಪ್ರತಿಭಾಶಾಲಿಯೂ ಆಗಿದ್ದರೆ ಆಗಾಗ ಎದುರಾಗುವ ರಾಜಕೀಯ ಮತ್ತು ಆರ್ಥಿಕ ತೊಂದರೆಗಳನ್ನು ತಡೆದು, ಜಡ ಆವರಣದಲ್ಲೂ ಕೂಡಾ ಗೆದ್ದು ಬಾಳುವನು. ಸಾಕಷ್ಟು ಜನರು ಪ್ರೋತ್ಸಾಹಗಳಿಲ್ಲದೆ ಆತ ತನ್ನ ಕೆಲಸ ಸಾಗಿಸಿಕೊಂಡು ಕೃಪಾರ್ಥತೆ ಹೊಂದಿ ವಿಮುಕ್ತನಾಗುವನು. ಅಂತಹವರನ್ನೂ ಕಾಲವು ಪಡೆದು ಗುರುತಿಸಿ ಸನ್ಮಾನ ಮಾಡುವುದುಂಟು. ಕಲಾವಿದನು ಅನುಕೂಲ ಆವರಣವಿದ್ದಲ್ಲಿ ಸ್ವಾತಂತ್ರ್ಯ ತೋರಿಕೊಂಡು ತನ್ನ ಕೆಲಸ ಸಾಗಿಸಿಕೊಂಡು ಹೋಗುತ್ತಾನೆ. ಆಗಲೂ ಅವನ ವರ್ಚಸ್ಸು ಜನಗಳ ಮೇಲೂ ಹಾದು ಜನ ಜೀವನದ ವರ್ಚಸ್ಸು ಅವನ ಮೇಲೂ ಬೀಳುತ್ತಿರುತ್ತವೆ. ಒಮ್ಮೆ ಪ್ರಸಿದ್ಧಿ ಬಂತೋ, ಕಲಾವಿದನು ಭ್ರಷ್ಟನಾಗುವುದೂ ಹೆಚ್ಚಿಗೆ ಸ್ಥಿತ ಕಾಮನೆ ಮತ್ತು ಜನರ ಪ್ರಭು ತಾನೆಂಬ ಮತ್ತು ಬರುವುದು ಸ್ವಾಭಾವಿಕವಿದೆ. ಜನತೆಯೊಳಗೆ ಸದಾ ವಿಲೀನವಾಗಿ ಆತ ತನ್ನ ಶ್ರೇಷ್ಠತೆ ತೋರಿಸಬೇಕಾಗುತ್ತದೆ.

ಒಂದಿಲ್ಲದೆ ಎಂಡಿಲ್ಲ ಬಿಂದುವಿಲ್ಲದೆ ಗೆರೆಯಿಲ್ಲ. ಗೆರಿಯಿಲ್ಲದೆ ಚಿತ್ರವಿಲ್ಲ ವ್ಯಂಗ್ಯಚಿತ್ರವಿಲ್ಲದೆ ಯಾವುದೇ ದಿನಪತ್ರಿಕೆ ಪರಿಪೂರ್ಣವಾಗುವುದಿಲ್ಲ. ಪತ್ರಿಕೆಗಳ ಮೂರ್ತಿಯೊಂದರಲ್ಲಿ ಪ್ರಕಟವಾಗುವ ವ್ಯಂಗ್ಯಚಿತ್ರಗಳು ಓದುಗರ ಗಮನವನ್ನು ಸೆಳೆಯುವುದರಲ್ಲಿ ಯಶಸ್ವಿಯಾಗಿವೆ. ಪತ್ರಿಕೆಯ ಸಂಪಾದಕೀಯ ಲೇಖನಗಳಿಗಿಂತಲೂ ಹೆಚ್ಚು ಪ್ರಭಾವಶಾಲಿಯಾಗಿ ಬೆಳೆದ ವ್ಯಂಗ್ಯಚಿತ್ರಗಳು ಸರ್ವಾಧಿಕಾರಿಗಳನ್ನು ಆಡಳಿತ ಚುಕ್ಕಾಣಿ ಹಿಡಿದವರನ್ನೂ ನಡುಗಿಸಿವೆ. ವ್ಯಂಗ್ಯಚಿತ್ರಕಾರನ ವಿಡಂಬನಾತ್ಮಕ ಕುಂಚದ ಗೆರೆಗಳು ಪ್ರಪಂಚದ ಎಲ್ಲಾ ಜನರ ಮೆಚ್ಚುಗೆಯನ್ನು ಗಳಿಸಿವೆ.

ಪತ್ರಿಕೆಗಳ ಮೂಲೆಯಲ್ಲಿ ಪ್ರಕಟವಾದರೂ ಕೂಡ ವ್ಯಂಗ್ಯ ಚಿತ್ರಗಳಿಗಾಗಿಯೇ ಪತ್ರಿಕೆಗಳನ್ನು ಓದುವವರ ಸಂಖ್ಯೆಗೇನೂ ಕಮ್ಮಿಯಿಲ್ಲ. ಏನೂ ಓದದಿದ್ದರೂ ಸೈ ವ್ಯಂಗ್ಯಚಿತ್ರವನ್ನಂತೂ ನೋಡಲೇಬೇಕು. ಇವರಿಗೆ ಆ ರೀತಿ ಆಗಲು ಹಿರಿಯ ವ್ಯಂಗ್ಯಚಿತ್ರಕಾರರೂ ಕೂಡ ಕೊಡುಗೆ ಅಪಾರ ಹಾಗೂ ಅದ್ಭುತ. ಶಂಕರ್ ಪಿಳ್ಳೈ,, ಆರ್.ಕೆ. ಲಕ್ಷ್ಮಣ್, ಮಾರಿಯೋ ಮಿರಾಂಡಾ, ಅಬು ಅಬ್ರಹಾರ ಇನ್ನೂ ಅನೇಕ ಜನ ಹಿರಿಯ ವ್ಯಂಗ್ಯಚಿತ್ರಕಲಾವಿದರೂ ಈ ರೀತಿಯನ್ನು ಅತೀ ಶ್ರೀಮಂತಗೊಳಿಸಿದರು. ಜನಸಾಮಾನ್ಯರಿಗೆ ತಲುಪಿಸಿ ಹೆಚ್ಚಿನ ಪ್ರೀತಿಯನ್ನು ಗಳಿಸಿದರು.

ವ್ಯಂಗ್ಯಚಿತ್ರಗಳು ಸಮಾಜದ ಆಗುಹೋಗುಗಳಿಗೆ ಕನ್ನಡಿಹಿಡಿಯುತ್ತವೆ. ಅವುಗಳ ಉದ್ದೇಶ ಬರಿ ಹಾಸ್ಯವಷ್ಟೇ ಅಲ್ಲ, ಶಿಕ್ಷಣವೂ ಆಗಿದೆ. ಜನರನ್ನು ನಗಿಸುತ್ತಲೇ ಅವರ ತಪ್ಪುಗಳನ್ನು ವ್ಯಂಗ್ಯಚಿತ್ರಗಳು ಎತ್ತಿತೋರಿಸುತ್ತವೆ. ಈ ಮೂಲಕ ಸಮಾಜವನ್ನು ನಿಧಾನವಾಗಿ ಪರಿವರ್ತಿಸಲು ಅವು ಸಹಾಯಕವಾಗಿವೆ. ಅಲ್ಲದೇ ಪ್ರಬಲ ಸಾರ್ವಜನಿಕ ಅಭಿಪ್ರಾಯ ರೂಡಿಸಲೂ ತುಂಬ ನೆರವಾಗುತ್ತವೆ.

ವ್ಯಂಗ್ಯ ಚಿತ್ರಕಲೆ ಇಷ್ಟೊಂದು ಜನಪ್ರಿಯತೆಗಳಿಸಿದ್ದರೂ ಈ ಕಲೆಗೆ ಪ್ರಾತಿನಿಧಿಕವಾಗಿ ರಾಷ್ಟ್ರಮಟ್ಟದಲ್ಲಿ ಒಂದು ಸಂಸ್ಥೆಯಿರಲಿಲ್ಲ. ಈ ಕ್ಷೇತ್ರದಲ್ಲಿನ ಪ್ರತಿಭೆಗಳನ್ನು ಗುರ್ತಿಸಿ, ಗೌರವಿಸಿ, ಅದರ ಕಲೆಯನ್ನು ಮುಂದಿನ ಪೀಳಿಗೆಗಾಗಿ ಸಂಗ್ರಹಿಸಿ ಕಾಯ್ದಿರಸಲು, ಉದಯೋನ್ಮುಖ ವ್ಯಂಗ್ಯಚಿತ್ರಕಾರರನ್ನು ತರಬೇತಿಗೊಳಿಸಲು ಮತ್ತು ಕಲೆಯ ಸರ್ವತೋಮುಖ ಬೆಳವಣಿಗೆಗೆ ಪೂರಕವಾಗುವ ಸಂಸ್ಥೆಯೊಂದರ ತೀವ್ರ ಅಗತ್ಯವಿತ್ತು. ಆ ಹೊತ್ತಿಗೆ ವ್ಯಂಗ್ಯ ಚಿತ್ರಕಾರರು ಮತ್ತು ವ್ಯಂಗ್ಯಚಿತ್ರ ಕಲೆಯನ್ನು ಉನ್ನತ ಹಂತಕ್ಕೆ ಕೊಂಡೊಯ್ಯಲು ಹುಟ್ಟಿಕೊಂಡದ್ದು ಇಂಡಿಯನ್ ಇನ್ಸ್‌ಟ್ಯೂಟ್ ಆಫ್ ಕಾರ್ಟೂನಿಷ್ಟ್ಸ್.

ಪ್ರಚಾರದ ಅಬ್ಬರವಿಲ್ಲದೆ ಹಾಗೂ ಸದ್ದುಗದ್ದಲವಿಲ್ಲದೆ ಬೆಂಗಳೂರಿನ ಮಹಾತ್ಮ ಗಾಂಧಿ ರಸ್ತೆಯಲ್ಲಿರುವ ಇಂಡಿಯನ್ ಇನ್ಸಿಟ್ಯೂಟ್ ಆಫ್ ಕಾರ್ಟೂನಿಸ್ಟ್ ಸಂಸ್ಥೆಯು ಹಲವಾರು ವರ್ಷಗಳಿಂದ ವ್ಯಂಗ್ಯಚಿತ್ರಕಾರರ ಅಪರೂಪ ಪ್ರದರ್ಶನದ ತಾಣವಾಗಿ ಸೇವೆ ಸಲ್ಲಿಸುತ್ತಿದೆ. ಇದು ಕರ್ನಾಟಕದ ಎಷ್ಟೋ ಜನರಿಗೆ ಗೊತ್ತಿಲ್ಲ.

ಭಾರತೀಯ ವ್ಯಂಗ್ಯಚಿತ್ರಕಾರರ ಸಂಸ್ಥೆ ಐಐಸಿ ಸ್ಥಾಪನೆಯಾದದ್ದು, ೨೦೦೧ ಜನವರಿ, ಆರಂದು. ಆಗಿನ ರಾಜ್ಯಪಾಲರಾದ ವಿ.ಎಸ್. ರಮಾದೇವಿ ಅವರು ಇದನ್ನು ಉದ್ಘಾಟಿಸಿದರು. ಆಗ ಸಂಸ್ಥೆಯ ಅಧ್ಯಕ್ಷರಾಗಿದ್ದವರು ಖ್ಯಾತ ವ್ಯಂಗ್ಯಚಿತ್ರಕಾರ ಬಿ.ವಿ. ರಾಮಮೂರ್ತಿ, ವ್ಯವಸ್ಥಾಪಕ ಟ್ರಸ್ಟಿಯಾಗಿದ್ದವರು ಖ್ಯಾತ ವ್ಯಂಗ್ಯ ಚಿತ್ರಕಾರ ವಿ.ಜಿ. ನರೇಂದ್ರ ಅವರು (ಈಗಲೂ ಅವರು ಅದೇ ಸ್ಥಾನದಲ್ಲಿದ್ದಾರೆ.)

ಹಾಗೇ ಆರಂಭವಾದ ಸಂಸ್ಥೆ ರಾಷ್ಟ್ರದ ವ್ಯಂಗ್ಯಚಿತ್ರಕಾರರಲ್ಲಿ ತೀವ್ರ ಸಂಚಲನ ಸೃಷ್ಟಿಸಿತು. ಅಂತರಾಷ್ಟ್ರೀಯ ಮಟ್ಟದಲ್ಲೂ ಗುರ್ತಿಸಿಕೊಂಡಿತು. ಕಲೆಯಲ್ಲಿ ಆಸಕ್ತಿ ಇರುವವರನ್ನು ಪೋಷಿಸಿತು. ವ್ಯಂಗ್ಯಚಿತ್ರಕಾರರನ್ನು ಒಂದೆಡೆ ಸೇರಿಸಿದ್ದು ಒಂದು ಮಹತ್ವದ ಕೆಲಸವನ್ನು ಈ ಗ್ಯಾಲರಿ ನಿರ್ವಹಿಸಿದೆ.

ಎಲ್ಲಕ್ಕಿಂತ ಹೆಚ್ಚಾಗಿ ಈ ಸಂಸ್ಥೆ ಒಂದು ಕಾರ್ಟೂನ್ ಗ್ಯಾಲರಿಯನ್ನು ಸ್ಥಾಪಿಸಿತು. ದೇಶದಲ್ಲಿ ಪ್ರಪಥಮ ಬಾರಿಗೆ ಆರಂಭವಾದ ಕಾರ್ಟೂನ್ ಗ್ಯಾಲರಿ ಇದಾಗಿದೆ. ಅಲ್ಲಿಯವರೆಗೆ ಪೈಟಿಂಗ್ ಗ್ಯಾಲರಿಗಳಿತ್ತು. ಚಿತ್ರಕಾರರು ಚಿತ್ರಗಳನ್ನು ಬರೆದು ಗ್ಯಾಲರಿಯಲ್ಲಿ ಪ್ರದರ್ಶಿಸಬಹುದಿತ್ತು. ಆದರೆ ವ್ಯಂಗಚಿತ್ರಕಾರರಿಗೆ ಮಾತ್ರ ಯಾವುದು ಗ್ಯಾಲರಿ ಇರಲಿಲ್ಲ. ಆದುದರಿಂದ ಅವರು ಒಂದೋ ಪತ್ರಿಕೆಯಲ್ಲಿ ಪ್ರಕಟಿಸಬೇಕಿತ್ತು. ಇಲ್ಲದಿದ್ದರೆ ತಮ್ಮ ಸಂಗ್ರಹದಲ್ಲಿ ಇಡಬೇಕಿತ್ತು. ಆ ಸ್ಥಿತಿಯನ್ನು ಬದಲು ಮಾಡಿತು ಈ ಸಂಸ್ಥೆ. ಅಷ್ಟೇ ಅಲ್ಲ ವ್ಯಂಗ್ಯಚಿತ್ರ ಕುರಿತಾದ ಎಲ್ಲಾ ಮಾಹಿತಿ ಇರುವ ಒಂದು ಅದ್ಭುತ ಗ್ರಂಥಾಲಯವೂ ಇದೆ.

ಈ ಸಂಸ್ಥೆ ದೇಶದಲ್ಲಿಯೇ ವ್ಯಂಗ್ಯಚಿತ್ರಕಾರರ ಪ್ರಥಮ ಸಂಸ್ಥೆ ಎನ್ನುವ ಕಾರಣಕ್ಕೆ ಮತ್ತು ವ್ಯಂಗ್ಯ ಚಿತ್ರಕಾರರ ಪ್ರಥಮ ಗ್ಯಾಲರಿ ಎನ್ನುವ ಕಾರಣಕ್ಕೆ ೨೦೦೮ರಲ್ಲಿ 'ಲಿಮ್ಕಾ' ದಾಖಲೆ ಪುಸ್ತಕದಲ್ಲಿ ಸ್ಥಾನ ಪಡೆದಿದೆ.

ಹಿರಿಯ ಖ್ಯಾತ ಉದ್ಯಮಿ ಶ್ರೀ ಅಶೋಕ ಖೇಣಿಯವರು ವ್ಯಂಗ್ಯ ಚಿತ್ರಗಳ ಪರಮ ಪ್ರೇಮ ಹಾಗೂ ನೈಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು. ಅವರು ಈ ಕಾರ್ಟೂನ್ ಸಂಸ್ಥೆಯ ಗೌರವ ಕಾರ್ಯಾಧ್ಯಕ್ಷರಾಗಿ ತಮ್ಮ ಒಡೆತನಕ್ಕೆ ಸೇರಿದ ಮಿಡ್‌ಫೋರ್ಡ್ ಹೌಸ್ ಕಟ್ಟಡದಲ್ಲಿ ೫,೦೦೦ ಚದರ ಅಡಿಯಷ್ಟು ಜಾಗವನ್ನು ವ್ಯಂಗ್ಯ ಚಿತ್ರಕಾರರ ಸಂಸ್ಥೆಗೆ ಬಿಟ್ಟುಕೊಟ್ಟರು. ಅದರಲ್ಲಿ ೧೫೦೦ ಚದರ ಅಡಿಯಷ್ಟು ವಾಚನಾಲಯಕ್ಕೆ ೧೫೦೦ ಚದರ ಅಡಿಗಳಷ್ಟು ಸಭಾಂಗಣಕ್ಕೆ ಮೀಸಲಾಗಿದೆ.

ಈ ಗ್ಯಾಲರಿಯನ್ನು ೨೦೦೭ರಲ್ಲಿ ಆಗಿನ ರಾಜ್ಯಪಾಲ ಟಿ.ಎನ್. ಚತುರ್ವೇದಿ ಅವರು ಉದ್ಘಾಟಿಸಿದರು. ಮೊತ್ತ ಮೊದಲ ''ಪ್ರದರ್ಶನದಲ್ಲಿ ಬಿ.ಬಿ. ರಾಮಮೂರ್ತಿ, ಬಿ.ಜಿ. ನರೇಂದ್ರ, ವಿ.ಜಿ. ಗುಜ್ಜಾಲಪ್ಪ ವ್ಯಂಗ್ಯಚಿತ್ರ ಪ್ರದರ್ಶನ ನಡೆಯಿತು. ಈ ಸಂಸ್ಥೆಯ ಸಂಗ್ರಹದಲ್ಲಿ ವ್ಯಂಗ್ಯಚಿತ್ರಗಳಿಗೆ ಸಂಬಂಧಪಟ್ಟ ಪುಸ್ತಕಗಳು ಖ್ಯಾತ ವ್ಯಂಗ್ಯಚಿತ್ರಕಾರರ ಜೀವನ ಚರಿತ್ರೆ, ಆತ್ಮಕತೆಗಳು, ಸಿ.ಡಿ. ದೇಶದ ಪ್ರಮುಖ ವ್ಯಂಗ್ಯಚಿತ್ರಗಳಿಗೆ ಮೀಸಲಾಗಿರುವ ಪತ್ರಿಕೆಗಳು ಇವೆ. ಖ್ಯಾತ ನಾಟಕಕಾರ ಗಿರೀಶ್ ಕಾರ್ನಾಡ್ ತಮ್ಮ ಸಂಗ್ರಹದಲ್ಲಿದ್ದ ವ್ಯಂಗ್ಯ ಚಿತ್ರಗಳ ಪುಸ್ತಕಗಳನ್ನು ಗ್ಯಾಲರಿಗೆ ನೀಡಿದ್ದಾರೆ. ಅಲ್ಲದೆ ಈವರೆಗೆ ೪೯ ವ್ಯಂಗ್ಯ ಚಿತ್ರ ಪ್ರದರ್ಶನಗಳು ನಡೆದಿವೆ.

ಆರ್.ಕೆ. ಲಕ್ಷ್ಮಣ್, ಮಾರಿಯೋ ಈ ಮುಂತಾದವರು ತಮ್ಮ ವ್ಯಂಗ್ಯಚಿತ್ರಗಳ ಪ್ರದರ್ಶನದ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಮಾರಿಯೋ ಅವರ ವ್ಯಂಗ್ಯಚಿತ್ರ ಪ್ರದರ್ಶನದ ಸಂದರ್ಭದಲ್ಲಿ ಅವರ ವ್ಯಂಗ್ಯಚಿತ್ರಗಳ ಮುದ್ರಿತ ಪ್ರತಿಗಳು, ಪುಸ್ತಕಗಳು, ಹೊಳೆಯುವ ಟೌಲ್ಸ್‌ನ ಮೇಲಿನ ವ್ಯಂಗ್ಯಚಿತ್ರಗಳು, ಶುಭಾಶಯ ಪತ್ರಗಳು, ಪುಸ್ತಕಗಳನ್ನು ಜನರ ಸರತಿ ಸಾಲಲ್ಲಿ ನಿಂತು ಖರೀದಿಸಿದ್ದರು. ಸುಮಾರು ಐದು ಲಕ್ಷ ರೂಪಾಯಿಯಷ್ಟು ಹಣ ಇವರು ವ್ಯವಸ್ಥೆ ಮಾಡಿದ ಖ್ಯಾತ ವಾಸ್ತುಶಿಲ್ಪಿ ಗೆರಾಲ್ಡ್ ಡ ಕುನ್ಹಾ ಅವರಿಗೆ ಸಂದಿತು. ಇನ್ನೊಂದು ಅಚ್ಚರಿಯ ವಿಷಯ ಎಂದರೆ ಈವರೆಗೆ ಕಲಾಕೃತಿಗಳಿಗೆ ಮಾತ್ರ ಮಾರುಕಟ್ಟೆ ಒದಗಿಸದ ಬೆಂಗಳೂರು, ಈಗ ವ್ಯಂಗ್ಯ ಚಿತ್ರಗಳಿಗೂ ಮಾರುಕಟ್ಟೆ ಒದಗಿಸಿದೆ. ವ್ಯಂಗ್ಯ ಚಿತ್ರಗಳ ಗ್ಯಾಲರಿಯಲ್ಲಿ ಪಾಂಡುರಂಗರಾವ್, ಜಯರಾಮ್ ಉಡುಪ ಜಪಾನಿನ ಕಗಾಯ್ ಅವರ, ವ್ಯಂಗ್ಯಚಿತ್ರ ಪ್ರದರ್ಶನ ನಡೆದಾಗ ಜನ ದುಡ್ಡು ಕೊಟ್ಟು ಖರೀದಿ ಮಾಡಿ ಅಚ್ಚರಿಯನ್ನುಂಟುಮಾಡಿ ಉದಾಹರಣೆಯನ್ನು ಇಲ್ಲಿ ಕೇಳಬುದಾಗಿದೆ.

ಈ ಸಂಸ್ಥೆಯ ವ್ಯಂಗ್ಯ ಚಿತ್ರಗಳ ಸ್ಪರ್ಧೆ ತುಂಬ ರೋಚಕವಾಗಿದೆ. ಸೋನಿಯಾ ಗಾಂಧಿ ಹಾಗೂ ಮನ್‌ಮೋಹನ್‌ಸಿಂಗ್‌ನ ಕ್ಯಾರಿಕೇಟರ್‌ಗಳ ಸ್ಪರ್ಧೆ ಅಂತರಾಷ್ಟ್ರೀಯ ಮಟ್ಟದಲ್ಲಿ ಈ ಬಾರಿ ಏರ್ಪಡಿಸಲಾಗಿದೆ. (ಪ್ರಯೋಜಕರು ಶ್ರೀ ವಿ.ಆರ್. ಮೆಮೋರಿಯಲ್ ಟ್ರಸ್ಟ್ ಬೆಂಗಳೂರು) ಪ್ರತಿ ವರುಷವೂ ಹಿರಿಯ ಕಲಾವಿದರಿಗೆ ಗೌರವ ಮತ್ತು ಯುವ ಪ್ರತಿಭೆಗಳ ಸ್ಪರ್ಧೆ ನಡೆದುಕೊಂಡು ಬಂದ ಅಪರೂಪದ ಸಂಪ್ರದಾಯಗಳು, ಯುವಕರಿಗೆ ದೊರೆಯುವ ಈ ಅವಕಾಸಗಳು ವ್ಯಂಗ್ಯ ಚಿತ್ರಕಲಾ ವಿಕಾಸಕ್ಕೆ ಹೊಸ ದಾರಿ ಕಲ್ಪಿಸುತ್ತದೆ. ಇಲ್ಲಿಯವರೆಗೂ ಸುಮಾರು ೬೨ ವಿಭಿನ್ನ ಹಾಗೂ ವೈಶಿಷ್ಟ್ಯಮಯ ಪ್ರದರ್ಶನಗಳು ಜರುಗಿವೆ. (ವರದಿ ಹೊಸದಿಗಂತ ೨೨.೦೨.೨೦೧೨) ಪ್ರಕಾರವಾಗಿದೆ.

ಮಾಜಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪನವರು, ನಾಡಿನ ಗಣ್ಯರು, ಹಿರಿಯ ಪತ್ರಕರ್ತರು ಸಂಗೀತ ಹಾಗೂ ಚಲನಚಿತ್ರ ನಿರ್ದೇಶಕರು, ಜ್ಞಾನಪೀಠ ವಿಜೇತ ಸಾಹಿತಿಗಳು, ಅಲ್ಲದೇ ದೇಶದ ಮೂವತ್ತಕ್ಕೂ ಹೆಚ್ಚು ಗಣಾತಿಗಣ್ಯರು ಇದು ಸಂಸ್ಥೆಯು ಅಲ್ಪ ಕಾಲಾವಧಿಯಲ್ಲಿಗಳಿದ ಬಹುದೊಡ್ಡ ಹೆಗ್ಗಳಿಕೆಯಿದೆ.

ಹಣಕಾಸಿನ ಸಲಹೆಗಾರರಾದ ಬಿ.ಜಿ. ಗುಜ್ಜಾರಪ್ಪ, ಸದಸ್ಯರಾದ ಬಿ.ಎನ್. ಚಂದ್ರಕಾಂತ ಅವರ ಸಲಹೆ ಸಹಕಾರ ನಿರಂತವಾಗಿದೆ. ಈ ಸಂಸ್ಥೆಯ ರಾಷ್ಟ್ರೀಯ ಸಲಹಾ ಮಂಡಳಿಯ ಉಪಾಧ್ಯಕ್ಷರಾದ ಸುಕುಮಾರಪಟ್ಟಿ ಹಾಗೂ ವಿಜಯ ಸೇಠ್, ಅಲ್ಲದೆ ಸದಸ್ಯರುಗಳಾದ ಇ.ಟಿ. ಉನ್ನಿ, ಕೇಶವ, ಸುರೇಶ, ಶ್ರೀಧರ ಸಾವಂತ,

ಸಿ.ಎನ್. ವೆಂಕಟೇಶ, ಶ್ಯಾಮಮೋಹನ, ಕುಸುಮಾ ಮತ್ತು ಪೀಟರ್ ಅವರಂಥ ದಿಗ್ಗಜರ ಮಾರ್ಗದರ್ಶನದಲ್ಲಿ ಸಂಸ್ಥೆ ಮುನ್ನಡೆಯುತ್ತಿದೆ.

ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಕಾರ್ಟೂನಿಸ್ಟ್ (INDIAN INSTITUTE OF CARTOONISTS) ಒಂದು ರೀತಿಯಲ್ಲಿ ಕಲಾರಾಧನೆಯ ದೇಗುಲವೆಂದೆನ್ನಬಹುದು. ಯುವ ವ್ಯಂಗ್ಯ ಚಿತ್ರ ಕಲಾವಿದರಿಗಂತೂ ತಮ್ಮ ಭವಿಷ್ಯ ಕಟ್ಟಿಕೊಳ್ಳಲು ಹೇಳಿ ಮಾಡಿಸಿದ ತಪಸ್ಸಿನ ತಾಣ. ವಿಷಯ ರಾಜಕೀಯ ವಿಡಂಬನೆಯಾಗಿರಬಹುದು. ಸಂಸಾರದ ದೃಷ್ಟಾಂತಗಳಾಗಿರಬಹುದು. ಯುವ ಕಲಾವಿದ ಪೆನ್ನಿನಲ್ಲಿ ಕುಚೋದ್ಯ-ಕುಚೇಷ್ಟೆಗಳ ಹಾಸ್ಯದ ಚೌಕಟ್ಟಿನಲ್ಲಿ ರಾರಾಜಿಸುತ್ತವೆ.

ಈ ಸಂಸ್ಥೆಯು ಸುಂದರ ಸುಸಜ್ಜಿತ ಆಕರ್ಷಕ ಗ್ಯಾಲರಿ ಹಾಲಿನೊಂದಿಗೆ ೭೫ ಆಸನಗಳುಳ್ಳ ಕಾನ್ಫರೆನ್ಸ್ ಹಾಲ್ ಪಡೆದುಕೊಂಡಿದೆ. ಇದು ನವೀನ ಸಕಲ ಸೌಲಭ್ಯಗಳುಳ್ಳ ಸಭಾಗೃಹ ಇಲ್ಲಿ ವ್ಯಂಗ್ಯ ಚಿತ್ರ ವಿನ್ಯಾಸ ಕಲಿಮಲು ಹಾಗೂ ಸಂಶೋಧನೆ ಕೈಗೊಳ್ಳಲು ಎಲ್ಲ ಅನುಕೂಲತೆಗಳನ್ನು ಹೊಂದಿದೆ.

ಇಂದು ವ್ಯಂಗ್ಯ ಚಿತ್ರಕಾರರು ಕೇರಳ, ತಮಿಳುನಾಡು, ಆಂದ್ರ, ಮಹಾರಾಷ್ಟ್ರ ರಾಜ್ಯಗಳಿಂದ ಮಾತ್ರವಲ್ಲ ದೂರದ ದೆಹಲಿ, ಪಶ್ಚಿಮ ಬಂಗಾಳದಿಂದಲೂ ವ್ಯಂಗಚಿತ್ರಗಳ ಪ್ರದರ್ಶನಕ್ಕೆ ಅವಕಾಶ ಕೋರಿ ಬರಲಾರಂಭಿಸಿದುದು ಗ್ಯಾಲರಿಯ ಜನಪ್ರಿಯತೆಗೆ ಸಾಕ್ಷಿಯಾಗಿ ನಿಂತಿದೆ.

ಕಾರ್ಟೂನ್ ಗ್ಯಾಲರಿಯನ್ನು ರಾಜ್ಯದ ಹಾಗೂ ದೇಶದ ಎಲ್ಲ ವಲಯಗಳಿಗೂ ವಿಸ್ತರಿಸುವುದು, ಕಾರ್ಟೂನ್‌ಗಳ ಮನೆ ರಚನೆ, ಯುವ ಕಲಾವಿದರಾಗಿ ವಿಶೇಷ ಕಾರ್ಯಾಗಾರಗಳು, ಅನಿಮೇಶನ್ ಚಿತ್ರಗಳ ತರಬೇತಿ ಹೀಗೆ ಹತ್ತು ಹಲವು ಯೋಜನೆಗಳನ್ನು ಕಾರ್ಯಗತಗೊಳಿಸಲು ಈ ಸಂಸ್ಥೆಯು ಸನ್ನದ್ಧವಾಗಿದೆ.

ಇಂಡಿಯನ್ ಇನ್ಸಿಟ್ಯೂಟ್ ಆಫ್ ಕಾರ್ಟೂನ್ ಸಂಸ್ಥೆಯು ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಕಲಾ ಭೂಪಟದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಹೀಗೆ ವ್ಯಂಗ್ಯ ಚಿತ್ರಕಲೆಯಲ್ಲಿ ವಿಭಿನ್ನ ಕೆಲಸಗಳನ್ನು ಮಾಡುತ್ತಿರುವ ಭಾರತೀಯ ವ್ಯಂಗ್ಯ ಚಿತ್ರಕಾರರ ಸಂಸ್ಥೆಗೆ ಇದೇ ಜೂನ್ ೪ ರಂದು ಹತ್ತು ವರ್ಷ ತುಂಬಿದೆ. ಆ ಪ್ರಯುಕ್ತ ಜೂನ್ ೧೧ ರಂದು ೧೦ನೇ ವರ್ಷದ ಸಂಭ್ರಮಾಚರಣೆ ನಡೆಯಲಿದೆ. ಸಂಸ್ಥೆಯಿಂದ ಇನ್ನಷ್ಟು ಒಳ್ಳೆಯ ಕೆಲಸವನ್ನು ನಡೆಯಲೆಂದು ಹಾರೈಸೋಣ.

ಜೂನ್ ೮, ೨೦೦೧ರಂದು ಕರ್ನಾಟಕದ ಆಗಿನ ರಾಜ್ಯಪಾಲೆಯಾದ ಶ್ರೀಮತಿ ವಿ.ಎಂಸ್. ರಮಾದೇವಿ ಅವರು ವ್ಯಂಗ್ಯಚಿತ್ರವೊಂದನ್ನು ಬರೆಯುವ ಮೂಲಕ ಐಐಸಿಯನ್ನು ಉದ್ಘಾಟಿಸಿದರು. ಅದೇ ಸಂದರ್ಭದಲ್ಲಿ ಹಿರಿಯ ವ್ಯಂಗ್ಯಚಿತ್ರಕಾರರ ಕೃತಿಗಳ ಪ್ರದರ್ಶನವನ್ನು ಮಾಜಿ ಕೇಂದ್ರ ಸಚಿವರಾದ ಶ್ರೀ ಅನಂತಕುಮಾರ್ ಅವರು ಉದ್ಘಾಟಿಸಿದರು. ರಾಜ್ಯದ ಮಾಜಿ ವಾರ್ತಾ ಸಚಿವರಾದ ಶ್ರೀ ಬಿ.ಕೆ. ಚಂದ್ರಶೇಖರ್ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಜೂನ್ ೮ ಮತ್ತು ೯ರಂದು ಎರಡು ದಿನಗಳ ಕಾಲ ದೇಶದ ಅನೇಕ ಕಡೆಗಳಿಂದ ಬಂದ ವ್ಯಂಗ್ಯಚಿತ್ರಕಾರರೆಲ್ಲ ಸೇರಿ, ಕಲೆಯ ಸ್ಥಿತಿಗತಿಗಳ ಬಗ್ಗೆ ಚರ್ಚೆ ನಡೆಸಿದರು. ಹಿರಿಯ ವ್ಯಂಗ್ಯಚಿತ್ರಕಾರರು

ತಮ್ಮ ಅನುಭವಗಳನ್ನು ಹಂಚಿಕೊಂಡು ಕಿರಿಯರಿಗೆ ಸ್ಥಳದಲ್ಲೇ ವ್ಯಂಗ್ಯಚಿತ್ರ ರಚನೆ ಮೂಲಕ ಮಾರ್ಗದರ್ಶನ ನೀಡಿದರು.

ಜೂನ್ ೯, ೨೦೦೧ರಂದು ಮುಕ್ತಾಯ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಬಂದ, ಕರ್ನಾಟಕದ ಮುಖ್ಯಮುಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು ಸಂಸ್ಥೆಯ ವೆಬ್‌ಸೈಟ್ ಉದ್ಘಾಟಿಸಿದರಲ್ಲದೇ ಖ್ಯಾತ ವ್ಯಂಗ್ಯಚಿತ್ರಕಾರರಾದ ಶ್ರೀ. ಮಾರಿಯೋ ಡಿ ಮಿರಾಂಡಾ (ಗೋವಾ), ಶ್ರೀ ಎಸ್. ಡಿ ಫಡ್ನೀಸ್ (ಮಹಾರಾಷ್ಟ್ರ), ಶ್ರೀಪ್ರಾಣ್ (ದಿಲ್ಲಿ), ಶ್ರೀಗೋಪುಲು (ತಮಿಳ್ನಾಡು), ಶ್ರೀ ಬಾಪು (ಆಂಧ್ರ ಪ್ರದೇಶ), ಶ್ರೀ ಯೇಸುದಾಸ್ (ಕೇರಳ), ಶ್ರೀ ಎಸ್.ಕೆ. ನಾಡಿಗ್ (ಕರ್ನಾಟಕ) ಅವರನ್ನು ''ಜೀವಮಾನ ಸಾಧನೆ ಪ್ರಶಸ್ತಿ'' ೨೦೦೨ ಫೆಬ್ರವರಿ ೧೪ ರಂದು ಏರ್ಪಡಿಸಿದ ವಿಶೇಷ ಸಮಾರಂಭದಲ್ಲಿ ಶ್ರೀ ಎಸ್.ಎಂ. ಕೃಷ್ಣ ಅವರು ದೇಶದ ಜನಪ್ರಿಯ ವ್ಯಂಗ್ಯಚಿತ್ರಕಾರ ಶ್ರೀ ಆರ್‌ಕೆ. ಲಕ್ಷ್ಮಣ ಅವರನ್ನು ಜೀವಮಾನ ಸಾಧನೆ ಪ್ರಶಸ್ತಿ ನೀಡಿ ಸನ್ಮಾನಿಸಿದರು.

೨೦೦೩ ಜನವರಿ ೧ ರಂದು ಸಂಸ್ಥೆಯು ''ಪತ್ರಿಕಾ ಸ್ವಾತಂತ್ರ್ಯ ರಕ್ಷಿಸಿ'' ಎಂಬ ರಾಷ್ಟ್ರಮಟ್ಟದ ವ್ಯಂಗ್ಯಚಿತ್ರ ಪ್ರದರ್ಶನವನ್ನು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಏರ್ಪಡಿಸಿತ್ತು ಬೆಂಗಳೂರು ವಿ.ವಿ. ಕುಲಪತಿ ಶ್ರೀ ಎಂ.ಎಸ್. ತಿಮ್ಮಪ್ಪ ಪ್ರದರ್ಶನವನ್ನು ಉದ್ಘಾಟಿಸಿದರು. ದೇಶಾದ್ಯಂತ ನೂರಾರು ವ್ಯಂಗ್ಯಚಿತ್ರಕಾರರು ಪ್ರದಶನದಲ್ಲಿ ಪಾಲ್ಗೊಂಡಿದ್ದರು.

೨೦೦೪ ಮಾರ್ಚ್‌ನಲ್ಲಿ ಐಐಸಿ ಅಧ್ಯಕ್ಷರಾದ ಬಿ.ವಿ.ರಾಮಮೂರ್ತಿ ವಿಧಿವಶರಾದರು. ನೂತನ ಅಧ್ಯಕ್ಷರಾಗಿ ಹುಡುಕಾಟದಲ್ಲಿದ್ದಾಗ ಮ್ಯಾನೇಜಿಂಗ್ ಟ್ರಸ್ಟ್ ನರೇಂದ್ರ ಅವರಿಗೆ ಪತ್ರಿಕೆಯಲ್ಲಿ ಪ್ರಕಟವಾದ ವ್ಯಂಗ್ಯಚಿತ್ರವೊಂದರ ಮೂಲಕ ನೈಸ್ ಸಂಸ್ಥೆಯ ಮ್ಯಾನೇಜಿಂಗ್ ಡೈರೆಕ್ಟರ್ ಶ್ರೀ. ಅಶೋಕ ಖೇಣಿ ಅವರ ಪರಿಚಯವಾಯಿತು. ಶ್ರೀ. ಖೇಣಿ ಅವರು ಅಪ್ರತಿಮ ವ್ಯಂಗಚಿತ್ರ ಪ್ರೇಮಿಯಾಗಿದ್ದರಲ್ಲದೇ ಈ ಕಲೆಯನ್ನು ದೇಶದಲ್ಲಿ ಬೆಳಸಬೇಕು ಎನ್ನುವ ಅಭಿಪ್ರಾಯ ಹೊಂದಿದ್ದರು. ಆ ಕಾರಣದಿಂದಾಗಿ ಸಂಸ್ಥೆಯ ಗೌರವಾಧ್ಯಕ್ಷ ಪದವಿ ಅಲಂಕರಿಸಲು ಅವರನ್ನು ಆಹ್ವಾನಿಸಲಾಯಿತು. ಶ್ರೀ. ಖೇಣಿ ಅವರು ತುಂಬ ಸಂತೋಷದಿಂದ ಅದನ್ನು ಒಪ್ಪಿ ಸಂಸ್ಥೆಗೆ ಒಂದು ಸುಭದ್ರ ನೆಲೆಯನ್ನು ಒದಗಿಸಿಕೊಟ್ಟಿರುವದಲ್ಲದೇ ತುಂಬ ಉತ್ಸಾಹದಿಂದ ದೇಶದಲ್ಲೇ ಮೊದಲನೆಯದಾದ ಕಾರ್ಟೂನ್ ಗ್ಯಾಲರಿಯನ್ನು ಸ್ಥಾಪಿಸಿ ಸಾಧನೆಗೈದಿದ್ದಾರೆ.

ಶ್ರೀ. ಖೇಣಿ ಅವರ ಮಹಾ ಪೋಷಕತ್ವದಲ್ಲಿ ೨೦೦೭ ಆಗಸ್ಟ್ ೧೬ರಂದು ದೇಶದಲ್ಲೇ ಪ್ರಥಮ ಎನ್ನಬಹುದಾದ ಕಾರ್ಟೂನ್ ಗ್ಯಾಲರಿಯನ್ನು ಆಗಿನ ರಾಜ್ಯಪಾಲರಾದ ಶ್ರೀ.ಟಿ.ಎನ್. ಚತುರ್ವೇದಿ ಅವರು ಉದ್ಘಾಟಿಸಿದರು. ಪ್ರಾರಂಭದ ವ್ಯಂಗ್ಯಚಿತ್ರ ಪ್ರದರ್ಶನದಲ್ಲಿ ಸ್ವರ್ಗೀಯ ಶ್ರೀ.ಬಿ.ವಿ.ರಾಮಮೂರ್ತಿ, ಶ್ರೀ.ಬಿ.ಜಿ.ನರೇಂದ್ರ, ಶ್ರೀ.ಬಿ.ಜಿ.ಗುಜ್ಜಾರಪ್ಪ ಅವರ ಕೃತಿಗಳನ್ನು ಪ್ರದರ್ಶಿಸಲಾಗಿತ್ತು.

ದೇಶದಲ್ಲೇ ಮೊದಲನೆಯಾದ ಭಾರತೀಯ ವ್ಯಂಗ್ಯಚಿತ್ರಕಾರರ ಸಂಸ್ಥೆ(ಐಐಸಿ) ಮತ್ತು ಇಂಡಿಯನ್ ಕಾರ್ಟೂನ್ ಗ್ಯಾಲರಿ ಎರಡೂ ದೇಶದ ಪ್ರತಿಷ್ಠಿತ ''ಅಮ್ಮಾ ಆಫ್ ರೇಕಾರ್ಡ್ಸ್-೨೦೦೮''ರಲ್ಲಿ ಸೇರ್ಪಡೆಯಾಗಿ ಸಮಸ್ತ ಕನ್ನಡಿಗರ ಅಭಿಮಾನಕ್ಕೆ ಪಾತ್ರವಾಗಿವೆ.

೨೦೦೮ ಪ್ರಾರಂಭದಲ್ಲಿ ಪ್ರಥಮ 'ಮಾಯಾ ಕಾಮತ್ ಸ್ಮಾರಕ ಪ್ರಶಸ್ತಿ, ಸ್ಪರ್ಧೆಗಳನ್ನು ಘೋಷಿಸಲಾಯಿತು. ಈ ಪ್ರಶಸ್ತಿಗಳನ್ನು ದಿ, ಮಾಯಾ ಕಾಮತ್ ಅವರ ಪತಿ ಶ್ರೀ. ಅಮರನಾಥ ಕಾಮತ್ ಪ್ರಾಯೋಜಿಸಿದ್ದರು. ರಾಷ್ಟ್ರಾದ್ಯಂತ ನೂರಾರು ವ್ಯಂಗ್ಯಚಿತ್ರಕಾರರು ಈ ಸ್ಪರ್ಧೆಯಲ್ಲಿ ಭಾಗವಹಿಸಿದ ಕಾರಣ ಸ್ಪರ್ಧೆ ಯಶಸ್ವಿಯಾಯಿತು.

ಏಪ್ರಿಲ್ ೨೦೦೮ರಲ್ಲಿ ಸ್ಪಧೆಯಲ್ಲಿ ವಿಜೇತರಾದವರ ಪಟ್ಟಿ ಬಿಡುಗಡೆ ಮಾಡಲಾಯಿತು. ಪ್ರಥಮ ಬಹುಮಾನ (ರೂ. ೨೫,೦೦೦/- ) ಶ್ರೀ ಸಂದೀಪ್ ಅಧ್ವೈರ್ಯ, ಔಟ್‌ಲುಕ್, ನವದೆಹಲಿ, ಎರಡನೇ ಬಹುಮಾನ (ರೂ. ೧೫೦೦೦/- ) ಶ್ರೀ. ರಾಮಧ್ಯಾನಿ, ನಾವಿಕ ಶಿವಮೊಗ್ಗ. ಮೂರನೇ ಬಹುಮಾನ (ರೂ. ೫೦೦೦/- ) ಶ್ರೀ. ಶಂಕರ್, ಸಾಕ್ಷಿ, ಹೈದರಾಬಾದ್. ಅತ್ಯುತ್ತಮ ಉದಯೋನ್ಮುಖ ವ್ಯಂಗ್ಯಚಿತ್ರಕಾರ ಪ್ರಶಸ್ತಿ (ರೂ. ೧೦,೦೦೦/- ) ಮುಜೀಬ್ ಪತ್ಲಾ. ಬೆಂಗಳೂರು, ಪೇಶಾವರ, ಪಾಕಿಸ್ತಾಮದ ವ್ಯಂಗ್ಯಚಿತ್ರಕಾರ ಮುಹಮ್ಮದ್ ಜಹೂರ್ ಆಯ್ಕೆ ಸಮಿತಿಯು ವಿಶೇಷ ಪ್ರಶಸ್ತಿಗಳಿಸಿದರು. ಸ್ಪರ್ಧೆಯ ಆಯ್ಕೆ ಸಮಿತಿಯಲ್ಲಿ ಶ್ರೀ. ಗಿರೀಶ್ ಕಾರ್ನಾಡ್ ಜ್ಞಾನಪೀಠ ಪ್ರಶಸ್ತಿ ವಿಜೇತರು, ಶ್ರೀ.ಎಸ್.ಜಿ. ವಾಸುದೇವ ಹೆಸರಾಂತ ಕಲಾವಿದರು, ಶ್ರೀ. ಕೇಶವ್, ಹಿಂದೂ ಪತ್ರಿಕೆಯ ವ್ಯಂಗ್ಯಚಿತ್ರಕಾರ ಸದಸ್ಯರಾಗಿದ್ದಾರೆ.

ಮೇ ೧೮, ೨೦೦೮ರಂದು ಮತ್ತೊಂದು ರಾಷ್ಟ್ರೀಯ ವ್ಯಂಗ್ಯಚಿತ್ರಕಾರರ ಸಮ್ಮೇಳನ ಏರ್ಪಡಿಸಲಾಗಿತ್ತು. ಅದನ್ನು ಐಐಸಿ ರಾಷ್ಟ್ರೀಯ ಸಲಹೆಗಾರರ ಸಮಿತಿ ಅಧ್ಯರಾದ ಶ್ರೀ. ಸುಕುಮಾರ್ ಉದ್ಘಾಟಿಸಿದರು. ಏಳು ಖ್ಯಾತ ವ್ಯಂಗ್ಯಚಿತ್ರಕಾರರನ್ನು ಸಮಾರಂಭದಲ್ಲಿ 'ಜೀವಮಾನ ಸಾಧನೆ ಪ್ರಶಸ್ತಿ' ನೀಡಿ ಗೌರವಿಸಲಾಯಿತು. ಸಮ್ಮೇಳನದಲ್ಲಿ ಡಾ. ಮಹೇಶ ಜೋಷಿ, ನಿರ್ದೇಶಕರು, ದೂರದರ್ಶನ, ಶ್ರೀ. ಅಮರನಾಥ ಕಾಮತ್, ಶ್ರೀ.ಎಸ್.ಷಡಕ್ಷರಿ, ರಮಣಶ್ರೀ ಗ್ರೂಪ್‌ನ ಮುಖ್ಯಸ್ಥರು ಮುಖ್ಯ ಅತಥಿಗಳಾಗಿ ಭಾಗವಹಿಸಿದ್ದರು.

ಜೀವಮಾನ ಸಾಧನೆ ಪ್ರಶಸ್ತಿ ವಿಜೇತರು - ಶ್ರೀ. ಉನ್ನಿ, ಇಂಡಿಯನ್ ಎಕ್ಸ್‌ಪ್ರೆಸ್, ನವದೆಹಲಿ, ಶ್ರೀ. ಕಾಕ, ಗಾಜಿಯಾಬಾದ್, ಶ್ರೀ ವಸಂತ ಸರವಟೆ, ಮುಂಬೈ, ಶ್ರೀ.ಟಿ. ವೆಂಕಟರಾವ್, ಹೈದರಾಬಾದ್, ಶ್ರೀ ಪ್ರಭಾಕರ್ ರಾವ್‌ಬೈಲ್, ಧಾರವಾಡ, ಶ್ರೀ ಥಾಮಸ್, ಕೊಚ್ಚಿ, ಶ್ರೀ ಮದನ್, ಚೆನ್ನೈ. ಸಂಸ್ಥೆಗೆ ಬೆನ್ನೆಲುಬಾಗಿ ನಿಂತ ಗೌರವ ಅಧ್ಯಕ್ಷ ಶ್ರೀ ಅಶೋಕ ಖೇಣಿಯವರನ್ನು ಇದೇ ಸಂದರ್ಭದಲ್ಲಿ ವಿಶೇಷವಾಗಿ ಸನ್ಮಾನಿಸಲಾಯಿತು. ಪ್ರಥಮ ಮಾಯಾ ಕಾಮತ್ ಸ್ಮಾರಕ ಪ್ರಶಸ್ತಿ ಸ್ಪರ್ಧೆಯಲ್ಲಿ ವಿಜೇತರಾದ ವ್ಯಂಗಚಿತ್ರಕಾರರಿಗೆ ಬಹುಮಾನಗಳನ್ನು ವಿತರಿಸಲಾಯಿತು.

ಮೇ ೧೭ರಂದು ವ್ಯಂಗ್ಯಚಿತ್ರ ಗ್ಯಾಲರಿಯಲ್ಲಿ 'ಜೀವಮಾನ ಸಾಧನೆ ಪ್ರಶಸ್ತಿ' ವಿಜೇತರ ಕೃತಿಗಳ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ನ್ಯಾಯಮೂರ್ತಿ ಎ.ಜೆ. ಸಾದಶಿವ ಅವರು ಮುಖ್ಯ ಅತಿಥಿಯಾಗಿ ಆಗಮಿಸಿದ್ದರು.

ಸೆಪ್ಟೆಂಬರ್ ೨೦೦೮ರಲ್ಲಿ ಅಂತರಾಷ್ಟ್ರೀಯ ಮನಮೋಹನ್ ಸಿಂಗ್ ಮತ್ತು ಸೋನಿಯಾಗಾಂಧಿ ಕ್ಯಾರಿಕೇಚರ್ ಸ್ಪರ್ಧೆಯನ್ನು ಘೋಷಿಸಲಾಯಿತು. ಶ್ರೀ.ವಿ.ಆರ್. ದೇಶಪಾಂಡೆ ಸ್ಮಾರಕ ದತ್ತಿ ಸಂಸ್ಥೆಯವರು

ಈ ಸ್ಪರ್ಧೆಯನ್ನು ಪ್ರಾಯೋಜಿಸಿದ್ದರು. ಕೆ.ಪಿ.ಸಿ.ಸಿ. ಅಧ್ಯಕ್ಷ ಶ್ರೀ.ಆರ್.ವಿ. ದೇಶಪಾಂಡೆ, ದತ್ತಿ ಸಂಸ್ಥೆಯ ಅಧ್ಯಕ್ಷರು ಕೂಡ.

ಈ ಕ್ಯಾರಿಕೇಚರ್ ಸ್ಪರ್ಧೆಯಲ್ಲಿ ದೇಶ ವಿದೇಶಗಳ ೬೨೫ ವ್ಯಂಗಚಿತ್ರಕಾರರು ಭಾಗವಹಿಸಿದರು. ಸ್ಪರ್ಧೆಯ ಆಯ್ಕೆ ಸಮಿತಿಯ ಸದಸ್ಯರಾಗಿ ನ್ಯಾ.ಎಂ.ಎನ್ ವೆಂಕಟಾಚಲಯ್ಯ, ಸುಪ್ರೀಂ ಕೋರ್ಟ್‌ನ ಮಾಜಿ ಮುಖ್ಯ ನ್ಯಾಯಾಧೀಶರು, ಶ್ರೀ.ವಿ.ಜಿ. ಅಂದಾನಿ ಪ್ರಿನ್ಸಿಪಾಲ್, ಐಡಿಯಲಂ ಫೈನ್ ಆರ್ಟ್ಸ್ ಕಾಲೇಜು, ಗುಲ್ಬರ್ಗ, ಶ್ರೀ. ಕೇಶವ, ಹಿಂದು ಪತ್ರಿಕೆ ವ್ಯಂಗ್ಯಚಿತ್ರಕಾರರು, ಚೆನ್ನೈ.

ಅಂತರಾಷ್ಟ್ರೀಯ ಮನಮೋಹನ್ ಸಿಂಗ್ ಕ್ಯಾರಿಕೇಚರ್ ಸ್ಪರ್ಧೆಯ ವಿಜೇತರು.

ಪ್ರಮುಥಮ ಬಹುಮಾನ ರೂ. ೧,೦೦,೦೦೦/- ವಾಹಿದ್ ಜಫಾರಿ, ಇರಾನ್.

ದ್ವಿತಿಯ ಬಹುಮಾನ ರೂ. ೫೦,೦೦೦/- ಸಲೀಮ್ ಮೊಹಮ್ಮದ್, ಇರಾನ್.

ತೃತೀಯ ಬಹುಮಾನ ರೂ. ೧೦,೦೦೦/- ಸಂದೀಪ್ ಅಧ್ವೈರ್ಯು, ಬೆಂಗಳೂರು

ಅಲೆನ್ ಸೌಟೋ ಮೆಯರ್ ಬ್ರೆಜಿಲ್.

ಜೂನಿಯರ್ ಲೋಪ್ಸ್, ಬ್ರೆಜಿಲ್.

ಅಂತರಾಷ್ಟ್ರೀಯ ಸೋನಿಯಾ ಗಾಂಧಿ ಕ್ಯಾರಿಕೇಚರ್ ಸ್ಪರ್ಧೆಯ ವಿಜೇತರು.

ಪ್ರಮಥಮ ಬಹುಮಾನ ರೂ. ೧,೦೦,೦೦೦/- ಬಿ.ಎನ್. ಬಿಸ್ವಾಲ್, ನಾಗಪುರ.

ದ್ವಿತಿಯ ಬಹುಮಾನ ರೂ. ೫೦,೦೦೦/- ಡಾ. ಸತೀಶ್ ಶೃಂಗೇರಿ, ಬೆಂಗಳೂರು.

ತೃತೀಯ ಬಹುಮಾನ ರೂ. ೧೦,೦೦೦/- ವ್ಯಾಲೆಂಟಿನ್ ಜಾರ್ಜ್, ಬಲ್ಗೇರಿಯಾ.

೩ ಸಮಾಧಾನಕರ ಬಹುಮಾನಗಳು ರೂ. ೫೦೦೦/- ರವಿ ಪೂಜಾರಿ, ಬೆಂಗಳೂರು

ರಿತುಪರ್ಣೋ ಮೈತಿ, ಹೌರ, ಪಶ್ಚಿಮ ಬಂಗಾಳ.

ಜನವರಿ ೨೦೧೧ರಲ್ಲಿ ದ್ವಿತಿಯ ಮಾಯಾ ಕಾಮತ್ ಸ್ಮಾರಕ ವ್ಯಂಗ್ಯಚಿತ್ರಗಳ ಸ್ಪರ್ಧೆಯನ್ನು ಘೋಷಿಸಲಾಯಿತು. ಮೊದಲ ಸ್ಪರ್ಧೆಗಿಂತಲೂ ಹೆಚ್ಚು ವ್ಯಂಗ್ಯಚಿತ್ರಕಾರರು ದೇಶಾದ್ಯಂತ ಈ ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ಅದರ ಫಲಿತಾಂಶ ಇಲ್ಲಿದೆ.

ಪ್ರಥಮ ಬಹುಮಾನ ರೂ. ೨೫,೦೦೦/- ಮಂಜುಲ್, ಡಿಎನ್ಎ, ಮುಂಬೈ

ದ್ವಿತಿಯ ಬಹುಮಾನ ರೂ. ೧೫,೦೦೦/- ಮುಹಮ್ಮದ್ ಜಹೂರ್, ಪೇಶಾವರ ಪಾಕಿಸ್ತಾನ

ತೃತೀಯ ಬಹುಮಾನ ರೂ. ೫೦೦೦/- ಪ್ರಶಾಂತ ಕುಲಕರ್ಣಿ, ಲೋಕಸತ್ತಾ, ಮುಂಬೈ

ಅತ್ಯುತ್ತಮ ಉದಯೋನ್ಮುಖ ವ್ಯಂಗ್ಯಚಿತ್ರಕಾರರು ರೂ. ೧೦೦೦೦/- ಮಿಸ್. ರೆಬೆಕಾ ಟೇಲರ್, ಬೆಂಗಳೂರು.

೧೮ನೇ ಜೂನ್ ೨೦೧೦ರಂದು ವ್ಯಂಗ್ಯಚಿತ್ರ ಗ್ಯಾಲರಿಯಲ್ಲಿ ನಡೆದ ಆಯ್ದ ವ್ಯಂಗ್ಯಚಿತ್ರಗಳ ಪ್ರದರ್ಶನದ ಉದ್ಘಾಟನೆ ಸಮಾರಂಭದಲ್ಲಿ ಈ ಮೇಲಿನ ಬಹುಮಾನಗಳನ್ನು ವಿತರಿಸಲಾಯಿತು. ಖ್ಯಾತ ಚಿತ್ರನಟ ಶ್ರೀ.ಸಿ.ಆರ್. ಸಿಂಹ, ಶ್ರೀ ಅಮರನಾಥ್ ಕಾಮತ್, ಶ್ರೀ.ಎಸ್. ಷಡಕ್ಷರಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

**ಸಂಸ್ಥೆಯ ಧ್ಯೆಯೋದ್ದೇಶಗಳು**

೧. ವ್ಯಂಗ್ಯಚಿತ್ರ ಕಲೆಯಲ್ಲಿ ಶ್ರೇಷ್ಠರನ್ನು ಗುರುತಿಸಿ ಜೀವಮಾನ ಸಾಧನೆ ಪ್ರಶಸ್ತಿ ಕೊಡುವುದು ಅಲ್ಲದೇ ಪ್ರಶಸ್ತಿ ವಿಜೇತರ ಬಗ್ಗೆ ಡಾಕ್ಯುಮೆಂಟರಿ ಚಿತ್ರ ತಯಾರಿಸುವುದು.

೨. ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ವ್ಯಂಗ್ಯಚಿತ್ರ ಸ್ಪರ್ಧೆಗಳನ್ನು ಏರ್ಪಡಿಸಲಾಗುವುದು. ಆಯ್ದ ವ್ಯಂಗ್ಯಚಿತ್ರಗಳನ್ನು ಬೆಂಗಳೂರು ಮತ್ತಿತರ ಪ್ರಮುಖ ನಗರಗಳಲ್ಲಿ ಪ್ರದರ್ಶಿಸುವುದು.

೩. ಬೆಂಗಳೂರು ಸಹಿತ ದೇಶದ ಇತರ ಪ್ರಮುಖ ನಗರಗಳಲ್ಲಿ ಸರಣಿ ''ಕಾರ್ಟೂನ್ ಗ್ಯಾಲರಿ''ಗಳನ್ನು ಸ್ಥಾಪಿಸುವುದು ಭಾಷಾ ವ್ಯಂಗ್ಯಚಿತ್ರಗಳನ್ನು ಇಂಗ್ಲೀಷ್ ಶೀರ್ಷಿಕೆಯೊಂದಿಗೆ ಪ್ರದರ್ಶಿಸಿವುದು.

೪. ಸಭಾಗಾರ, ಪ್ರದರ್ಶನ ಹಾಲ್, ಲೈಬ್ರರಿ, ಪಿಕ್ಚರ್ ಹಾಲ್‌ಗಳನ್ನೊಳಗೊಂಡ ಹೌಸ್ ಆಫ್ ಕಾಟೂನ್, ಕಟ್ಟಡ ನಿರ್ಮಾಣ, ಮೂಲ ವ್ಯಂಗ್ಯಚಿತ್ರಗಳಿಗಾಗಿ ಮತ್ತು ಪ್ರತಿಷ್ಠಿತರ ಕಾರ್ಟೂನ್ ಗೊಂಬೆಗಳಿಗಾಗಿ ಒಂದು ಮ್ಯೂಸಿಯಂ ನಿರ್ಮಾಣ.

೫. ಕಾರ್ಟೂನ್ ವರ್ಲ್ಡ್ ಹೆಸರಿನಲ್ಲಿ ಮಾಸ ಪತ್ರಿಕೆ ಪ್ರಕಟಣೆ

೬. ದತ್ತಿನಿಧಿ ಕಾರ್ಯಕ್ರಮಗಳು, ಚರ್ಚಾಕೂಟಗಳು, ಕ್ವಿಜ್ ಸ್ಪರ್ಧೆಗಳ ವ್ಯವಸ್ಥೆ

೭. ಉದಯೋನ್ಮುಖ ವ್ಯಂಗ್ಯಚಿತ್ರಕಾರರಿಗಾಗಿ ನಿಯಮಿತವಾಗಿ ವ್ಯಂಗ್ಯಚಿತ್ರ ಕಾರ್ಯಾಗಾರಗಳನ್ನು ಏರ್ಪಡಿಸುವುದು, ಕ್ಯಾರಿಕೇಚರ್, ಪಾಕೆಟ್ ಮತ್ತು ರಾಜಕೀಯ ವ್ಯಂಗ್ಯಚಿತ್ರ ಸ್ಟ್ರಿಪ್ ಕಾರ್ಟೂನ್, ಡುಡಲ್ಸ್, ಎನಿಮೇಷನ್ ವಿಷಯಗಳ ಬಗ್ಗೆ ಖ್ಯಾತನಾಮರಿಂದ ಭಾಷಣ ಮತ್ತು ಡೆಮೊ.

೮. ವ್ಯಂಗ್ಯಚಿತ್ರ ಕಲೆ ಪ್ರಪಂಚಕ್ಕೆ ಉತ್ತಮ ಕೊಡುಗೆ ನೀಡಿದ ಸಂಸ್ಥೆಗಳನ್ನು, ಮಹನೀಯರನ್ನು ಗುರುತಿಸಿ ಸನ್ಮಾನಿಸಿವುದು.

೯. ಎನಿಮೇಷನ್ ಸ್ಟುಡಿಯೋ ಸ್ಥಾಪಿಸಿ, ಎನಿಮೇಷನ್ ಫಿಲ್ಮಗಳನ್ನು ನಿರ್ಮಿಸುವುದು.

* * *



## ಕರ್ನಾಟಕದ ವ್ಯಂಗ್ಯಚಿತ್ರ ಗ್ಯಾಲರಿಯ ಒಂದು ನೋಟ





ಮುಖ್ಯಮಂತ್ರಿ ಎಸ್.ಎಮ್.ಕೃಷ್ಣರವರಿಂದ
ಏಳು ಜನ ಖ್ಯಾತ ವ್ಯಂಗ್ಯಚಿತ್ರಕಾರರನ್ನು ಸನ್ಮಾನಿಸಿದರು



ಶ್ರೀ ಅಶೋಕ ಹೇಣೆ, ಗೌರವ ಅಧ್ಯಕ್ಷರು,
ಶ್ರೀ ವಿ.ಜಿ.ನರೇಂದ್ರ, ವ್ಯವಸ್ಥಾಪಕ ಟ್ರಸ್ಟೀ



ಭಾರತದ ಮಾಜಿ ರಾಷ್ಟಪತಿ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ
ಅವರು ಮುಂಬೈನ ಶ್ರೇಯಸ್ ನವರೆ
ಅವರ ವ್ಯಂಗ್ಯಚಿತ್ರ ಪ್ರದರ್ಶನವನ್ನು ಉದ್ಘಾಟಿಸಿದರು










ಲೋಕಸಭಾ ಸದಸ್ಯ ಶ್ರೀ ಜನಾರ್ಧನ ಸ್ವಾಮಿ (ಚಿತ್ರದುರ್ಗ) ಅವರ ವ್ಯಂಗ್ಯಚಿತ್ರ ಪ್ರದರ್ಶನವನ್ನು ಸಿರಿಗೆರೆಯ ತರಳಬಾಳು ಜಗದ್ಗುರು ಡಾ. ಶಿವಮೂರ್ತಿ ಸ್ವಾಮೀಜಿ ಉದ್ಘಾಟಿಸುತ್ತಿರುವುದು



ಕರ್ನಾಟಕದ ರಾಜ್ಯಪಾಲ ಶ್ರೀ ಟಿ.ಎನ್.ಚತುರ್ವೇದಿ ಅವರು ಭಾರತೀಯ ವ್ಯಂಗ್ಯಚಿತ್ರ ಗ್ಯಾಲರಿಯನ್ನು ಉದ್ಘಾಟಿಸಿದರು. ಅವರ ಜೊತೆಗೆ ಶ್ರೀ ಅಶೋಕ ಖೇಣಿ ಮತ್ತು ವಿಧಾನ ಸಭಾಧ್ಯಕ್ಷ ಶ್ರೀ ಕೃಷ್ಣ ಇದ್ದಾರೆ.



## ನಿಯತಕಾಲಿಕೆಗಳಲ್ಲಿ ವ್ಯಂಗ್ಯ ಚಿತ್ರಗಳು

ಮಂಗಳ ವಾರಪತ್ರಿಕೆ

ಇಲ್ಲೊಬ್ಬಾಕೆ ಶೀಟಿ ಹೊಡದು ಲವ್ ಮಾಡಲು ಕರೆಯುತ್ತಿದ್ದಾಳಲ್ಲಾ?



★ ಶೀಟಿ ಹೊಡೆಯುವುದನ್ನು ಯಾರು ಕಲಿಸಿದರು ಎಂಬುದನ್ನು ಮೊದಲು ಕೇಳಿ.

ಓದುಗರ ಸವಾಲ್.... ಎಮ್ಮೆಸ್ಸೆಸ್

ಗಂಡನೇ ದೇವರೆಂದು ಪೂಜಿಸುವ ಹೆಣ್ಣೊಬ್ಬಳು ಇಲ್ಲದ್ದಾಳ ಈ ಕಾಲದಲ್ಲಿ ಇಂಥವರು ಇರಬಹುದೇ?



★ ಹಳೆಯ ನಂಬಿಕೆಗಳನ್ನು ಬುಡಮೇಲು ಮಾಡಲಾಗದು. ಗಂಡನ ಪಾದದ ಮೇಲೆ ತೆಂಗಿನಕಾಯಿ ಒಡೆಯುವ ಸಾಧ್ವಿಮಣಿಯರೂ ಇದ್ದಾರೆ.

8



ಇದೊಂದೇ ಸೀರೆ ಇರೋದು ಕೊಂಡುಕೊಂಡು ಬಿಡೀಮ್ಮಾ. ನಿಮ್ಮ ಪಕ್ಕದ್ಮನೇ ಪಾರ್ವತಮ್ಮನವರು ಆಗಲೇ ಬಂದು ನೋಡ್ಕೊಂಡು ಹೋದರು.

749



"ನಿಮ್ಮ ತಂದೆ ಮನೇಲಿದಾರೆಯೇ ಮಗು?"
"ಇಲ್ಲ - ಹೊರಗೆ ಹೋಗಿದಾರೆ"
"ಕಚೇರಿಗೆ ಹೋಗಿದ್ದಾರೆಯೆ ?"
"ಇಲ್ಲ"
"ಅದು ಹೇಗೆ ಗೊತ್ತು?"
"ಓಡಿ ಓಡಿ ಹೋಗುತ್ತಿದ್ದರು"

750



ಚುನಾವಣೇಲಿ ತಳ ಕಳಕೊಂಡ ಸಚಿವರ ತರಹಾ ಹೊಡಕೊಂಡಾ ಇರಬೇಡ್ವೆ - ಎಲ್ಲಿಗೆ ಹೋದೆಯೊ ಬೇಗ ಬಂದು ಕಣಿ ಹೇಳಿ ನಗುತ ಕೊರವಂಜಿ!

751



ಮಹಿಷೂರ ಕನ್ನಡಿಗ - ಹೋಗಿ ಬಿಟ್ಟುಬಿಟ್ಟೀನಿ ಅಂದೆಯಾ ಕೊರವಂಜಿ! ಮನೇಲಿ ನೀನು ಇದ್ದಿದ್ದೇ ತಿಳೀಲಿಲ್ಲವಲ್ಲೇ ನನಗೆ!

ಶಿಂಗಣ್ಣಾ .....



ಶಿಂಗಣ್ಣಾ .....



ಶಿಂಗಣ್ಣಾ .....



ಶಿಂಗಣ್ಣಾ .....



## ವ್ಯಂಗ್ಯ ಚಿತ್ರಕಲೆಯ ಶಿಬಿರ, ಪ್ರಾತ್ಯಕ್ಷಿಕೆ, ಸನ್ಮಾನಗಳು

**"You too can become a Cartoonist!"**

Cartoon Workshops are being conducted for young and old.

**Please Contact:**

**Indian Cartoon Gallery,**
No.1, Midford House, Midford Garden, Off M.G.Road, Near Big Kids Kemp Bldg.
Trinity Circle, Bangalore-560 001
Phone: 080 41758540, 09980091428
Email: info@cartoonistsindia.com
cartoonistsindia@gmail.com

## ಅಧ್ಯಾಯ : ಮೂರು

# ವ್ಯಂಗ್ಯ ಚಿತ್ರಕಲೆ ವಸ್ತು ವಿಷಯ



ಕಲೆಯ ಬಗ್ಗೆ ಅನೇಕ ವ್ಯಾಖ್ಯೆಗಳಿರಬಹುದು. ಆದರೆ ಕಲೆಯ ಪ್ರಕೃತಿಗನುಗುಣವಾಗಿ ಸೌಂದರ್ಯವು ಸಾಂಗತ್ಯಗಳ ಅಂದರೆ ಕ್ರಮಬದ್ಧವಾದ ಜೋಡಣೆಯಲ್ಲಿ ಜ್ಞಾನೇಂದ್ರಿಯಗಳ ಗ್ರಹಣ ಶಕ್ತಿಯಿಂದ ಕಾಣಿಸಿಕೊಳ್ಳುವ ಕ್ರಿಯೆಯಾಗಿದೆ. ಈ ಆಧಾರದ ಮೇಲೆ ನಾವು ಕಲೆಯ ಬಗ್ಗೆ ಅನೇಕ ವಾದಗಳನ್ನು ಶಾಸ್ತ್ರಗಳನ್ನು ಅಭಿಪ್ರಾಯಗಳನ್ನು ಕಲ್ಪಿಸುತ್ತಾ ಹೋಗಬಹುದು. ವಿಮರ್ಶಿಸಬಹುದು. ಆದರೆ ಈ ಎಲ್ಲಾ ಕಲ್ಪನೆಗಳಿಗೂ ಇಂದ್ರಿಯಗಳ ಕಲೆ ಎಂದು ಹೇಳುವ ಮಾತು ಹಳೆದಾಗಿದೆ. ಕಲೆಗೂ ಸೌಂದರ್ಯಕ್ಕೂ ಸಂಬಂಧ ಕಲ್ಪಿಸಬಾರದು ಎಂದೇನಿಲ್ಲವಾದರೂ, ಸಂಬಂಧ ಕಲ್ಪಿಸುವ ಅವಶ್ಯಕತೆ ಇದೆಯೇ ಎಂದು ಮೊದಲು ನಮ್ಮನ್ನು ನಾವು ಪ್ರಶ್ನಿಸಿಕೊಳ್ಳಬೇಕು. ಸೌಂದರ್ಯದ ಪರಿಜ್ಞಾ ಅಥವಾ ಕಲ್ಪನೆ ಅಸಾಧಾರಣ ಅಸ್ಥಿರತೆಯಿಂದ ತುಂಬಿದ ವಿಚಾರವಾಗಿದೆ ಎಂದೇ ಹೇಳಬಹುದು. ಇತಿಹಾಸದ ಪುಟಗಳನ್ನು ತಿರುವುತ್ತ ಇತ್ತಕಡೆ ಬಂದರೆ ಸೌಂದರ್ಯದ ಬಗ್ಗೆ, ಕಲೆಯ ಬಗ್ಗೆ ಕಾಲಕಾಲಕ್ಕೆ ವಿಚಾರಗಳು ಹೇಗೆ ಬದಲಾಗುತ್ತಬಂದಿವೆ ಎನ್ನುವುದು ಸ್ಪಷ್ಟವಾಗುತ್ತದೆ. ಇವೆಲ್ಲವುಗಳನ್ನು ಗಣನೆಗೆ ತೆಗೆದುಕೊಂಡಾಗ ನಿಜವಾದ ಅರ್ಥವನ್ನು ಹುಡುಕುವ ಪ್ರತಿಯೊಬ್ಬರೂ ತನ್ನದೇ ವ್ಯಾಖ್ಯೆಯನ್ನು ತಾನು ಮಾಡಿಕೊಂಡು ಮುಂದುವರಿಯ ಬೇಕಾಗುತ್ತದೆ ಎನ್ನುವುದು ಸ್ಪಷ್ಟವಾಗುತ್ತದೆ. ಅಜಂತಾ ಕಲೆ ಆಗಿರಬಹುದು, ಗುಪ್ತರ ಕಾಲದ ಕಲೆಯಾಗಿರಬಹುದು, ಬಾದಾಮಿಯ ಚಾಲುಕ್ಯರ ಕಲೆಯಾಗಿರಬಹುದು, ಪಲ್ಲವರ ಕಾಲದ ಕಲೆಯಾಗಿರಬಹುದು, ವಿಜಯನಗರದ ಅಥವಾ ಕೇರಳರ ಕಲೆಯಾಗಿರಬಹುದು, ಬುದ್ಧನ ಕಾಲದ ಹಾಗೂ ನಂತರ ಜೈನರು ಚಿತ್ರಗಳಾಗಿರಬಹುದು, ಮೊಗಲ ಕಾಲದ ಪರ್ಶಿಯನ್ ಕಲೆ ಇರಬಹುದು, ರಾಜಸ್ತಾನ ಹಾಗೂ ಗುಜರಾತ ಶೈಲಿ ಯಾಗಿರಬಹುದು. ನಂತರ ಪಾಶ್ಚಾತ್ಯಕಲೆಯ ಪ್ರಭಾವದ ಭಾರತೀಯ ಕಲಾ ಪ್ರಕಾರ ಹಾಗೂ ಇತ್ತೀಚಿನ ಸ್ವತಂತ್ರ ಭಾರತದ ನವ್ಯ ಕಲೆಯ ಪ್ರಕಾರ ಇವೆಲ್ಲವನ್ನು ಗಮನಿಸುತ್ತ ಬಂದಾಗ, ಕಲೆ ಆಯಾ ಕಾಲದ ಆಯಾ ದೇಶದ ಬೇಡಿಕೆಗಳನ್ನು ಪೂರೈಸುತ್ತ ಅಭಿವ್ಯಕ್ತಿಯನ್ನು ಪಡೆಯುತ್ತಾ ಹೊಸ ಹೊಸ ಅರ್ಥಗಳನ್ನು ಹುಡುಕುತ್ತಾ ಹೊಸ-ಹೊಸ ರೂಪಗಳನ್ನು ಕೊಡುತ್ತಾ ಬಂದಿರುವುದನ್ನು ನೋಡಿದಾಗ, ಕಾಲಕಾಲಕ್ಕೆ ಕಲೆ ವ್ಯಾಖ್ಯೆಗಳನ್ನು ಬದಲಾಯಿಸಿಕೊಂಡಿದೆ. ಕಲೆಯಲ್ಲಿ ವಿಶೇಷ ಗುಣ ಲಕ್ಷಣಗಳನ್ನು ಹೇಳಲು ಪ್ರತಿಯೊಬ್ಬ ಕಲಾವಿದ ತನ್ನದೇ ಆದ ಮಾರ್ಗಗಳನ್ನು ಕಂಡುಕೊಂಡಿದ್ದಾನೆ ಎನ್ನುವುದು ತಿಳಿಯುತ್ತದೆ.[೧]

ಅನೇಕ ಭಾವನೆಗಳನ್ನು ಮತ್ತು ಅರಿವನ್ನು ಸಹೃದಯ ನೋಡುಗರಲ್ಲಿ ಉದ್ದೀಪಿಸುವ ಕ್ರಮಬದ್ಧ ರೇಖೆಗಳ ಗಾರುಡಿಯೇ Cartoon (ಕಾರ್ಟೂನ್), ವ್ಯಂಗ್ಯಚಿತ್ರ ಅಥವಾ ಹಾಸ್ಯಚಿತ್ರ ಸಂವಹನ ಅತ್ಯಂತ

ಅಡಿಟಿಪ್ಪಣಿಗಳು

೦೧. ಶಂಕರ್ ಪಾಟೀಲ : ಚಿತ್ರಕಲಾ ಚಿಂತನೆ; ಪುಟ ಸಂಖ್ಯೆ-೯೨

ತ್ವರಿತವಾದುದು. ಒಂದು ಪೇಂಟಿಂಗ್ ತನ್ನ ಅರ್ಥಸಾಧ್ಯತೆಗಳನ್ನು ನೋಡುಗನಿಗೆ ನಿಧಾನವಾಗಿ ಬಿಟ್ಟುಕೊಡುತ್ತದೆ. ಅಂತೆಯೇ ಪ್ರತಿನೋಟದಲ್ಲೂ ಹೊಸ-ಹೊಸ ಹೊಳಹುಗಳನ್ನು ಕಲಾಕೃತಿಯೊಂದು ನೀಡಬಹುದು. ಆದರೆ ವ್ಯಂಗ್ಯಚಿತ್ರ ಸಂದರ್ಭದಲ್ಲಿನ ಪರಿಣಾಮವೇ ಬೇರೆ. ವ್ಯಂಗ್ಯಚಿತ್ರ ನೋಡಿದಾಕ್ಷಣ ನೋಡುಗರಲ್ಲಿ ಭಾವಗಳ ಉದ್ದೀಪನಗೊಳ್ಳುತ್ತವೆ. ತುಟಿಗಳಲ್ಲಿ ಕಿರುನಗೆಯ ಜೊತೆಗೆ, ವಿವಿಧ ಸಂಗತಿಗಳು ಕೆಲವೇ ಕ್ಷಣಗಳಲ್ಲಿ ಸಹೃದಯನ ಚಿತ್ತದಲ್ಲಿ ಹಾದುಹೋಗಬಹುದು. ಪೇಂಟಿಂಗ್ ಅಸ್ವಾದಿಸಲಿಕ್ಕೆ ಏಕಾಗ್ರತೆ ಅಗತ್ಯವಾದರೆ, ಯಾವುದೋ ಮನಸ್ಥಿತಿಯಲ್ಲಿರುವ ಓದುಗನನ್ನು ಕೂಡ ಈ ವ್ಯಂಗ್ಯಚಿತ್ರ ವೇಗವಾಗಿ ತನ್ನ ಹತ್ತಿರ ಸೆಳೆದುಕೊಳ್ಳುವಷ್ಟು ಶಕ್ತಿಶಾಲಿಯಾದುದು. ಅದು ಒಂದು ಸಂಗತಿಯನ್ನು ವ್ಯಂಗ್ಯ, ವಿಡಂಬನೆ, ತಿಳಿಹಾಸ್ಯ ಮೂಲಕ ವಿವರಿಸುತ್ತದೆ.

ಮಾಧ್ಯಮಗಳು ವೇಗವಾಗಿ ಬೆಳೆಯುತ್ತಿರುವ ಈ ಯುಗದಲ್ಲಿ ವ್ಯಂಗ್ಯಚಿತ್ರಗಳ ಪಾತ್ರ ಪರಿಣಾಮಕಾರಿಯಾಗಿದೆ. ಈ ಹಿಂದೆ ಚಿತ್ರಕಲೆಗೆ ಹೀಗೆಯೇ ಇರಬೇಕೆಂಬ ಇತಿಮಿತಿಗಳಿದ್ದವು. ನಿರ್ಧಿಷ್ಟ ಚೌಕಟ್ಟುಗಳಿದ್ದವು. ಗಂಭೀರ ವಿದ್ವಾಂಸರ ಆಪತ್ತಿಗೆ ಅನುಗುಣವಾಗಿ ಚಿತ್ರಕಲೆ ರೂಪುಗೊಳ್ಳುತ್ತಿತ್ತು. ಆದರೆ ಇಂಥ ಕಟ್ಟುಪಾಡುಗಳಿಲ್ಲದೆ ವ್ಯಂಗ್ಯಚಿತ್ರದ ಪರಿಧಿ ಅತ್ಯಂತ ವಿಶಾಲವಾದುದು. ಈ ವ್ಯಂಗ್ಯಚಿತ್ರಗಳು ಜನಸಾಮಾನ್ಯರಿಗೂ ಸುಲಭವಾಗಿ ತಲುಪುವಂತಹ ಮಾಧ್ಯಮವಾಗಿದೆ.

ಜಗತ್ತಿನ ಎಲ್ಲೆಡೆ ಬಳಸುವ 'ಕಾರ್ಟೂನ್' (Cartoon)ಎಂಬ ಜನಪ್ರಿಯ ಪದ ಇಟಲಿ ಮತ್ತು ಪ್ರಾನ್ಸ್‌ನಿಂದ ಬಂದದ್ದು, ಕಾರ್ಡ್ ಮತ್ತು ಪೇಪರ್ ಎಂಬ ಪದಗಳು ಸೇರಿ 'ಕಾರ್ಟೂನ್' ಆಗಿರಬಹುದು. ಪ್ರಾಥಮಿಕವಾಗಿ ಕಾರ್ಟೂನ್ ಎಂದರೆ ಕಾಗದ ಮೇಲಿನ ಕಲೆ. ಅದು ನಂತರ ಗೋಡೆಯ ಮೇಲೆ ಛಾವಣಿ ಅಥವಾ ದೊಡ್ಡ ಕ್ಯಾನ್ವಾಸ್ ಮೇಲೆ ಮಾಡಬಹುದು.[೨]

ಪತ್ರಿಕೆಗಳಲ್ಲಿ ಕಾರ್ಟೂನ್‌ಗೆ ಬೇರೆಯೇ ಅರ್ಥವಿದೆ. ಈ ಕಾರ್ಟೂನ್ ಜನರಿಗಾಗಿ ಸೃಷ್ಟಿಸಿದ ಚಿತ್ರ. ಅದರಲ್ಲಿ ಹಾಸ್ಯ ಲೇಪನ ಇರಬೇಕು. ಅಂದಹಾಗೇ ದೊಡ್ಡ ಪ್ರಮಾಣದಲ್ಲಿ ಜನರನ್ನು ತಲುಪಲು ಬಳಸಿಕೊಂಡ ಮಾರ್ಗವೇ ಈ ಕಾರ್ಟೂನ್ ಅಥವಾ ವ್ಯಂಗ್ಯ ಚಿತ್ರವಾಗಿದೆ.

ಕಾರ್ಮಾನ್, ಕಾಮಿಕ್ಸ್ ಮತ್ತು ಫನ್ನಿಸ್ - ಈ ಎಲ್ಲ ಪದಗಳು ಭಾಗಶಃ ಒಂದೇ ಅರ್ಥವನ್ನು ನೀಡುತ್ತವೆ. ಇಂದಿನ ದಿನಗಳಲ್ಲಿ ವ್ಯಂಗ್ಯಚಿತ್ರ ತುಂಬಾ ಗಂಭೀರವಾಗುತ್ತಿದೆ. ಅದು ಹಾಸ್ಯ ಪತ್ರಿಕೆಗಳನ್ನು ಮೀರಿ, ಉದ್ಯೋಗ ಮಾರುಕಟ್ಟೆಯಲ್ಲಿ ಸ್ಥಾನ ಪಡೆದಿದೆ. ಇಂದು ಜನಪ್ರಿಯ ಕಾರ್ಟೂನಿಸ್ಟ್ (ವ್ಯಂಗ್ಯ ಚಿತ್ರಕಲಾವಿದ) ಉತ್ತಮ ವೇತನವನ್ನು ಪಡೆಯುತ್ತಿದ್ದಾನೆ.

'ದಿ. ವರ್ಲ್ಡ್ ಎನ್‌ಸೈಕ್ಲೋಪೀಡಿಯಾ ಆಫ್ ಕಾರ್ಟೂನ್ಸ್'ನಲ್ಲಿ ಮೌರೈಸ್ ಹಾರ್ನ್ ಹೇಳುವಂತೆ; 'ಒಂದು ವಿಚಾರವನ್ನೂ ಯಾವ ಕಲಾಕೃತಿ ಆವರಿಸಿಕೊಳ್ಳುತ್ತದೆಯೋ ಅದೇ ಕಾಟೂರ್ನ್' ಅಂದರೆ ಚಿತ್ರ ಸಂಹವನದ ವಿಶಾಲ ವ್ಯಾಪ್ತಿಯನ್ನು ಅದು ಆವರಿಸಿಕೊಂಡಿದೆ. ಎಂದರ್ಥ.[೩]

ವ್ಯಂಗ್ಯಚಿತ್ರವನ್ನು ಪ್ರಾಥಮಿಕವಾಗಿ ವರ್ಗೀಕರಿಸಿ ಹೇಳುವುದಾದರೆ ಅವುಗಳು ಹೀಗಿವೆ

(೧) ವಿವರಣಾತ್ಮಕ ವ್ಯಂಗ್ಯಚಿತ್ರ (ಕಾರ್ಟೂನ್ ಇಲ್ಲುಸ್ಟ್ರೇಷನ್)

೦೨. ರಘುನಾಥ ಚ.ಹ : ವ್ಯಂಗ್ಯ ಚಿತ್ರ ವಿಶ್ವರೂಪ ; ಪುಟ ಸಂಖ್ಯೆ-೫೫

೦೩. ರಘುನಾಥ ಚ.ಹ : ವ್ಯಂಗ್ಯ ಚಿತ್ರ ವಿಶ್ವರೂಪ ; ಪುಟ ಸಂಖ್ಯೆ-೫೬

(೨) ಸಿಂಗಲ್ ಪ್ಯಾನೆಲ್ ಕಾರ್ಟೂನ್

(೩) ಕಥಾ ನಿರೂಪಕ ವ್ಯಂಗ್ಯಚಿತ್ರ (ನೆರೆಟಿವ್ ಆರ್ಟ್ ಕಾರ್ಟೂನ್)

ಅಷ್ಟು ಮಾತ್ರವಲ್ಲದೇ ಕಾಮಿಕ್ ಸ್ಟ್ರಿಪ್, ಅನಿಮೇಟಿಚ್ ವ್ಯಂಗ್ಯಚಿತ್ರ ಮತ್ತು ಇತರೆ ವ್ಯಂಗ್ಯಚಿತ್ರ ರೂಪಗಳನ್ನು ಇಲ್ಲಿ ಪಟ್ಟಿ ಮಾಡಬಹುದು. ಟೀ-ಶರ್ಟ್ ಮತ್ತು ಗ್ರೀಟಿಂಗ್ ಕಾರ್ಡ್(ಶುಭಾಶಯ ಪತ್ರ)ಗಳ ಮೇಲೆ ಕೂಡ ಈಗ ವ್ಯಂಗ್ಯಚಿತ್ರಗಳನ್ನು ಕಾಣಸಿಗುತ್ತವೆ. ಈಗಿನ ಯುವ ಸಮುದಾಯ ಈ ಬಗ್ಗೆ ಆಕರ್ಷಣೆ ಬೆಳೆಸಿಕೊಂಡಿವೆ.

ಕಾರ್ಟೂನ್ ಇಲ್ಲುಸ್ಟ್ರೇಷನ್‌ನಲ್ಲಿ ಚಿತ್ರದ್ದೆ ಮೇಲುಗೈ, ಇಲ್ಲಿ ಒಂದು ವಿಚಾರವನ್ನು ಆಕರ್ಷಕವಾಗಿ ಮತ್ತು ಉದಾಹರಣೆ ಸಹಿತ ಅಥವಾ ಕಲ್ಪನೆಯ ಮೂಲಕ ನಿರೂಪಿಸಲಾಗುತ್ತದೆ. ಅದೇ ಸಿಂಗಲ್ ಪ್ಯಾನೆಲ್ ಕಾರ್ಟೂನ್‌ಗಳಲ್ಲಿ ಪದಗಳು ಆಗಾಗ್ಗೆ ನುಸುಳುತ್ತವೆ. ಅಕ್ಷರಗಳು ಮತ್ತು ಚಿತ್ರದ ಮೂಲಕ ಇಲ್ಲಿ ವಿಷಯವನ್ನು ಹೇಳಲಾಗುತ್ತದೆ.

ಕಥಾ ನಿರೂಪಕ ವ್ಯಂಗ್ಯಚಿತ್ರಗಳಲ್ಲಿ ಮಾತಿನ ರೂಪದಲ್ಲಿ ಪದಗಳು ಬರುತ್ತವೆ. ಇವುಗಳಲ್ಲಿಸ ಸನ್ನಿವೇಶಗಳ ಮಾದರಿಯಲ್ಲಿ ಚಿತ್ರ ಮತ್ತು ಮಾತು ಜೊತೆಯಾಗಿರುತ್ತವೆ. ಅನಿಮೇಟೆಡ್ ಕಾರ್ಟೂನ್(ಜೀವ ತಳೆ ತುಂಬುವ ಅಥವಾ ಉತ್ಸಾಹ ತುಂಬುವ)ಗಳಲ್ಲಿ ಪದಗಳು ಶಬ್ದದ ಮೂಲಕ ಸೇರಿಕೊಳ್ಳುತ್ತವೆ. ಇಲ್ಲಿ ವ್ಯಂಗ್ಯಚಿತ್ರಗಳು ಚಲಿಸುತ್ತವೆ. ವ್ಯಂಗ್ಯಚಿತ್ರಗಳು ಚಲಿಸುವದರರೊಂದಿಗೆ ಕಥೆ ಅಥವಾ ಘಟನೆಗೆ ವೇಗವೊಂದು ಪ್ರಾಪ್ತಿಯಾಗಿ ನೋಡುಗರನ್ನು ರಂಜಿಸುತ್ತವೆ.

ಮೇಲಿನ ವರ್ಗೀಕರಣ ವ್ಯಂಗ್ಯಚಿತ್ರದ ಮೂಲ ಗುಣಗಳನ್ನು ಅರ್ಥಮಾಡಿಕೊಳ್ಳಲು ಸಹಾಯವಾಗಿವೆ. ವ್ಯಂಗ್ಯಚಿತ್ರಗಳ ವಿಷಯವನ್ನು ಸರಳಗೊಳಿಸುತ್ತವೆ. ಅಷ್ಟು ಮಾತ್ರವಲ್ಲದೇ ಅವುಗಳಲ್ಲಿ ಉತ್ಪ್ರೇಕ್ಷೆಯೂ ಇರುತ್ತದೆ. ಸರಳ ವ್ಯಂಗ್ಯಚಿತ್ರಗಳು ಎಲ್ಲರಿಗೂ ಸುಲಭವಾಗಿ ಅರ್ಥವಾಗುತ್ತವೆ. ಆದರೆ ಕೆಲವು ವ್ಯಂಗ್ಯಚಿತ್ರಗಳು ತುಂಬಾ ಸಂಕೀರ್ಣವಾಗಿರುತ್ತವೆ. ಚಾರ್ಲ್ಸ್ ಬ್ರಾಗ್, ಮೌಕ್ಕಿಸ್ ಸೆಂಡಾರ್ ಅಥವಾ ರೊನಾಲ್ಡ್‌ಶೇರ್ಲ್ಸ್ ಇನ್ನೂ ಅನೇಕ ವ್ಯಂಗ್ಯಚಿತ್ರ ಕಲಾವಿದರ ಚಿತ್ರಗಳು ಸುಲಭ ನೋಟಕ್ಕೆ ದಕ್ಕುವುದಿಲ್ಲ.

ಬಹುತೇಕ ವ್ಯಂಗ್ಯಚಿತ್ರಗಳಲ್ಲಿ ಮನುಷ್ಯನ ಮುಖ ಮತ್ತು ದೇಹ ಅತಿಶಯವಾಗಿ ಚಿತ್ರಿತವಾಗಿರುತ್ತದೆ. ಇನ್ನು ಸ್ಟೀವ್ ಕೆನ್ಯೂನ್ ಅಥವಾ ಸ್ಪೈಡರ್‌ಮ್ಯಾನ್ ವ್ಯಂಗ್ಯಚಿತ್ರಗಳು ವಾಸ್ತವಕ್ಕೆ ಹತ್ತಿರವಾಗಿವೆ. ಈ ಪಾತ್ರಗಳನ್ನು ಬಳಸಿಕೊಂಡು ರೂಪುಗೊಳ್ಳುವ ಕಥೆ ಮತ್ತು ಘಟನೆಗಳ ಅತಿಶಯ ಮತ್ತು ಉತ್ಪ್ರೇಕ್ಷೆ ಕಂಡು ಬಂದರೂ, ಚಿತ್ರಗಳು ಸಹಜವಾಗಿಯೇ ಇರುತ್ತವೆ.

**ವ್ಯಂಗ್ಯಚಿತ್ರಗಳ: ಇನ್ನಷ್ಟು ವರ್ಗೀಕರಣ**

ವಿವರಣಾತ್ಮಕ ವ್ಯಂಗ್ಯಚಿತ್ರ (ಕಾರ್ಟೂನ್ ಇಲ್ಲುಸ್ಟ್ರೇಷನ್), ಸಿಂಗಲ್ ಪ್ಯಾನೆಲ್ ವ್ಯಂಗ್ಯಚಿತ್ರ ಅಥವಾ ನಿರೂಪಕ ವ್ಯಂಗ್ಯಚಿತ್ರಗಳನ್ನು (ನೆರೇಟಿವ್ ಆರ್ಟ್ ಕಾರ್ಟೂನ್) ಅಧ್ಯಯನದ ಅನುಕೂಲಕ್ಕಾಗಿ ಮತ್ತಷ್ಟು ವಿಂಗಡನೆಗೆ ಒಳಪಡಿಸಬಹುದು.

ವ್ಯಂಗ್ಯ ಚಿತ್ರಕಲೆ ವಸ್ತು ವಿಷಯ

(೧) ವಿವರಣಾತ್ಮಕ ವ್ಯಂಗ್ಯಚಿತ್ರ (ಕಾರ್ಟೂನ್ ಇಲ್ಲುಸ್ಟ್ರೇಷನ್)

ಅ. ದಿ ಸ್ಮಾಲ್ (ಸಣ್ಣ ಚಿತ್ರಗಳು)

ಆ. ನಿರೂಪಕ ಇಲ್ಲುಸ್ಟ್ರೇಷನ್ (ದಿನಪತ್ರಿಕೆ ಮತ್ತು ನಿತಕಾಲಿಕೆಗಳಲ್ಲಿನ ವ್ಯಂಗ್ಯಚಿತ್ರಗಳು)

ಇ. ಕಥಾನಿಕ ಇಲ್ಲುಸ್ಟ್ರೇಷನ್ (ಮಕ್ಕಳ ಪುಸ್ತಕಗಳಲ್ಲಿನ ವ್ಯಂಗ್ಯಚಿತ್ರಗಳು)

ಈ. ಜಾಹಿರಾತು ಇಲ್ಲುಸ್ಟ್ರೇಷನ್ (ದಿನಪತ್ರಿಕೆ ಅಥವಾ ನಿಯತಕಾಲಿಕೆಗಳಲ್ಲಿನ ವ್ಯಂಗ್ಯಚಿತ್ರ ಸಹಿತ ಜಾಹಿರಾತುಗಳು)

(೨) ಸಿಂಗಲ್ ಪ್ಯಾನೆಲ್ ವ್ಯಂಗ್ಯಚಿತ್ರ

ಅ. ಹಾಸ್ಯಭರಿತ ವ್ಯಂಗ್ಯಚಿತ್ರ

ಆ. ಸಂಪಾದಕೀಯ ವ್ಯಂಗ್ಯ ಚಿತ್ರ (ದಿನ ಪತ್ರಿಕೆಯ ಸಂಪಾದಕೀಯ ಪುಟದಲ್ಲಿನ ವ್ಯಂಗ್ಯಚಿತ್ರಗಳು)

ಇ. ಕ್ರೀಡಾ ವ್ಯಂಗ್ಯಚಿತ್ರ (ಇವು ವಿರಳ, ವಿಶೇಷ ಸಂದರ್ಭಗಳಲ್ಲಿ ಕ್ರೀಡಾ ಪುಟಗಳಲ್ಲಿ ಪ್ರಕಟವಾಗುತ್ತವೆ.)

ಈ. ಇತರೆ ಸಿಂಗಲ್ ಪೆನೆಲ್ ವ್ಯಂಗ್ಯಚಿತ್ರಗಳು ಆರೋಗ್ಯ, ಯೋಗ, ಸಾಮಾನ್ಯಜ್ಞಾನ ವಿಷಯಗಳಿಗೆ ಸಂಬಂಧಿಸಿದ ಅಂಕಣಗಳಲ್ಲಿ ಬಳಕೆಯಾಗುತ್ತವೆ.

(೩) ಕಥನ ನಿರೂಪಕ ವ್ಯಂಗ್ಯಚಿತ್ರ

ಅ. ಕಾಮಿಕ್ ಸ್ಟ್ರಿಪ್: ಹಾಸ್ಯ (Doonerbury) ಹಾಗೂ ಸಾಹಸಿ (Dick Tracy. stene Canyon) ಪ್ರಧಾನ ಕಥಾ ಸರಣಿಗಳು

ಆ. ಕಾಮಿಕ್ ಪುಸ್ತಕ: ಸಾಂಪ್ರದಾಯಿಕ ಕಾಮಿಕ್ ಪುಸ್ತಕಗಳ (ಹಾಸ್ಯ ವಿಜ್ಞಾನದ ಫಿಕ್ಷನ್. ಮೌಲ್ಯ ಪ್ರತಿಪಾದಕ ಕಾಮಿಕ್ ಇತ್ಯಾದಿ)

ಇ. ಭೂಗತ ಕಾಮಿಕ್ ಪುಸ್ತಕಗಳು: ಕಾಮಿಕ್ ಸಂಹಿತೆ ಮಂಡಳಿಯು ನಿಯಮಗಳನ್ನು ಗಾಳಿಗೆ ತೂರಿ ಪ್ರಕಟಗೊಂಡ ಪುಸ್ತಕಗಳು

ಈ. ಗ್ರಾಫಿಕ್ ಸಣ್ಣಕತೆ ಅಥವಾ ಗ್ರಾಫಿಕ್ ಕಾದಂಬರಿ (convenant with God)

(೪) ಅನಿಮೇಟೆಡ್ ಕಾರ್ಟೂನ್

ಅ. ಅನಿಮೇಟೆಡ್ ಕಥೆಗಳು (ಟಾಮ್ ಅಂಡ್ ಜೆರ್ರಿ ಅಥವಾ ಬಗ್ಸ್‌ಬನ್ನಿ)

ಆ. ಅನಿಮೇಟೆಡ್ ಸಾಕ್ಷ್ಯಚಿತ್ರಗಳ

ಇ. ಅನಿಮೇಟೆಡ್ ಚಲನಚಿತ್ರಗಳು (ಸ್ನೊ ವೈಟ್)

ಈ. ವಾಣಿಜ್ಯೋದ್ದೇಶಕ್ಕೆ ಅನಿಮೇಟೆಡ್ ಕಾರ್ಟೂನ್ ಬಳಕೆ (ಕಿರುತೆರೆ ವಾಹಿನಿಗಳಲ್ಲಿ ಇವುಗಳನ್ನು ಕಾಣಬಹುದು.)

**(೫) ಕಾರ್ಟೂನ್ ಆಧಾರಿತ ಉತ್ಪನ್ನಗಳು**

**ಅ. ಶುಭಾಶಯ ಪತ್ರಗಳು, ಸ್ಟೇಷನರಿ ಮತ್ತು ಪೋಸ್ಟ್‌ಗಳು :**

ಶುಭಾಶಯ ಪತ್ರಗಳ ಮೇಲೆ ಕಾರ್ಟೂನ್‌ಗಳನ್ನು ಮುದ್ರಿಸುವುದು ಜನಪ್ರೀಯ ಪಾತ್ರವಾಗಿದೆ. ಇಂಥ ಶುಭಾಶಯ ಪತ್ರಗಳು ಮಕ್ಕಳಿಗೆ ಅಚ್ಚುಮೆಚ್ಚು. ಮಕ್ಕಳು ಬಳಸುವ ಪಠ್ಯಪುಸ್ತಕ, ಲೇಕನ ಸಾಮಗ್ರಿಗಳಲ್ಲಿ ಕಾರ್ಟೂನ್ ಪಾತ್ರಗಳು ರಾರಾಜಿಸುತ್ತವೆ. ಜಾಮಿಟ್ರಿ ಬಾಕ್ಸ್, ಸ್ಕೂಲ್‌ಬ್ಯಾಗ್, ಪೆನ್ಸಿಲ್, ರಬ್ಬರ್, ಲೇಬಲ್, ಬಲೂನ್‌ಗಳು ಕಾರ್ಟೂನ್ ಇಲ್ಲದ ಜಾಗವಾದರೂ ಎಲ್ಲಿದೆ? ಇನ್ನು ವಾಣಿಜ್ಯ ಉದ್ದೇಶದ ಹಾಗೂ ಮಹಿತಿ ನೀಡುವ ಪೋಸ್ಟರ್‌ಗಳಲ್ಲಿ ಕಾರ್ಟೂನ್‌ಗಳು ಬಳಕೆವಾಗುತ್ತವೆ.

**ಆ. ಉಡುಗೆ-ತೊಡುಗೆ**

ಟಿ-ಶರ್ಟುಗಳಲ್ಲಿ ವ್ಯಂಗ್ಯಚಿತ್ರಗಳ ಬಳಕೆ ಜಗತ್ತಿನಾದ್ಯಂತ ಯುವ ಜನತೆ ಹಾಗೂ ಎಳೆಯರನ್ನು ಸೆಳೆದಿದೆ. ಮಕ್ಕಳ ಟಿ-ಶರ್ಟುಗಳ ಮೇಲೆ ಸ್ಪೈಡರ್ ಮ್ಯಾನ್, ಟಾಮ್ ಅಂಡ್ ಜರ್‍ರಿಯಂಥ ಚಿತ್ರಗಳು ಕಾಣಿಸಿಕೊಂಡರೆ; ತರುಣ ತರುಣಿಯರ ಎದೆಯ ಮೇಲೆ ಕ್ರಾಂತಿಕಾರಿಗಳು, ಚಲನಚಿತ್ರ ತಾರೆಯರು, ಜಾಗತಿಕ ಪ್ರಸಿದ್ಧಿಯ ರೇಖೆಗಳಾಗಿ ಕಂಗೊಳಿಸುತ್ತಾರೆ. ಕ್ರಾಂತಿಕಾರಿ ಚೆಗುವಾರನ ಇಲ್ಲುಸ್ಟ್ರೇಷನ್ ಜಗತ್ತಿನಾದ್ಯಾಂತ ಜಾಣಜಾಣೆಯರ ಎದೆಯ ಮೇಲೆ ಹೆಚ್ಚು ಕಾಣಿಸಿಕೊಳ್ಳುವ ಚಿತ್ರ. ಟಿ-ಶರ್ಟಗಳು ಮಾತ್ರವಲ್ಲದೆ ಬ್ಯಾಗ್‌ಗಳು, ಟೋಪಿಗಳ ಮೇಲೂ ವ್ಯಂಗ್ಯಚಿತ್ರಗಳು ಬಳಕೆಯನ್ನು ಪ್ರಸ್ತುತ ದಿನಗಳಲ್ಲಿ ನಾವು ಗಮನಿಸಬಹುದಾಗಿದೆ. ಅಲ್ಲದೆ ಕೆಲವು ಕೈವಸ್ತ್ರಗಳ ಮೇಲೆ ಸಹ ಈ ವ್ಯಂಗ್ಯಚಿತ್ರಗಳದೇ ಕಾರುಬಾರಾಗಿರುವುದನ್ನು ನಾವುಗಳು ಗಮನಿಸಬಹುದು.

**ಇ. ಗೃಹಬಳಕೆ ಉತ್ಪನ್ನಗಳು**

ಗೃಹೋಪಯೋಗಿ ಉತ್ಪನ್ನಗಳ ಮೇಲೂ ವ್ಯಂಗ್ಯಚಿತ್ರಗಳು ಸ್ಥಾನವನ್ನು ಪಡೆದಿವೆ. ತಿಂಡಿಯ ಡಬ್ಬಿ, ಹೊದಿಕೆಗಳು, ಗೋಡೆಗೆ ನೇತುಹಾಕುವಂತಹ ಕೆಲವು ಬಟ್ಟೆಯಂತೆ ವಸ್ತುಗಳು, ನೆಲಹಾಸುಗಳು ಹೀಗೆ ಮತೀಯ ವಿವಿಧ ಭಾಗಗಳಲ್ಲಿ ವ್ಯಂಗ್ಯಗಳ ವಿವಿಧ ಚಿತ್ರಗಳ ಪಾತ್ರಗಳು ಸ್ಥಾನ ಪಡೆದಿವೆ. ವಾಹನಗಳು ಮೇಲೂ ವ್ಯಂಗ್ಯಚಿತ್ರಗಳು ಕಾಣಿಸುವುವು. ಕೆಲವು ಅನುಕೂಲದಲ್ಲಿ ಶ್ರೀಮಂತ ಮನೆಯಲ್ಲಿ ಮಕ್ಕಳಿಗೆಂದೇ ಮೀಸಲಾದ ಕೋಣೆಗಳ ಗೋಡೆಗಳ ಮೇಲೆ ವಿವಿಧ ಆಕಾರಗಳ ಹಾಸ್ಯಸ್ಪದವಾದ ವ್ಯಂಗ್ಯಚಿತ್ರಗಳನ್ನು ಕಾಣಬಹುದಾಗಿದೆ.

ಇಂದಿನ ಆಧುನಿಕ ಯುಗದ ಸಂದರ್ಭದಲ್ಲಿ ವ್ಯಂಗ್ಯಚಿತ್ರಗಳ ಇಲ್ಲದ ಸ್ಥಳವಾಗಲಿ, ವಸ್ತುವಾಗಲಿ ಮನೆಗಳಾಗಲಿ ಇನ್ನೂ ಅನೇಕ ಕಡೆಗಳಲ್ಲಿ ಈ ವ್ಯಂಗ್ಯಚಿತ್ರಗಳದ್ದೇ ಸ್ಥಳಗಳನ್ನು ಆಕ್ರಮಿಸಿಕೊಂಡಿರುವುದನ್ನು ನಾವು ಗಮನಿಸಬಹುದಾಗಿದೆ. ಸ್ವರೂಪದ ಹಿನ್ನಲೆಯಲ್ಲಿ ವ್ಯಂಗ್ಯಚಿತ್ರಗಳನ್ನು ವಿವಿಧ ಭಾಗಗಳಾಗಿ ವರ್ಗೀಕರಣಕ್ಕೆ ಒಳಗಾದಂತೆ ವಸ್ತುವಿನ ಹಿನ್ನಲೆಯಲ್ಲಿ ಕೂಡ ವರ್ಗೀಕರಣಕ್ಕೆ ಒಳಗಾಗಬಲ್ಲದು. ವಸ್ತುವಿನ ದೃಷ್ಟಿಯಿಂದ ವ್ಯಂಗ್ಯಚಿತ್ರಗಳನ್ನು ಪ್ರಮುಖವಾಗಿ ಮೂರು ಭಾಗಗಳಲ್ಲಿ ವಿಂಗಡಿಸಬಹುದಾಗಿದೆ.

ವ್ಯಂಗ್ಯ ಚಿತ್ರಕಲೆ ವಸ್ತು ವಿಷಯ

೧. ರಾಜಕೀಯ ಸಂಬಂಧಿಸಿದ ವ್ಯಂಗ್ಯಚಿತ್ರಗಳು

೨. ಸಾಮಾಜಿಕ ವ್ಯಂಗ್ಯಚಿತ್ರಗಳು

೩. ಹಾಸ್ಯಪ್ರಧಾನ ವ್ಯಂಗ್ಯ ಚಿತ್ರಗಳು

೧. ರಾಜಕೀಯಕ್ಕೆ ಸಂಬಂಧಿಸಿದ ವ್ಯಂಗ್ಯಚಿತ್ರಗಳು

ವ್ಯಂಗ್ಯಚಿತ್ರಗಳಲ್ಲಿ ಅತ್ಯಂತ ಸಮೃದ್ಧಿಯಾದವು ಈ ರಾಜಕೀಯ ವ್ಯಂಗ್ಯಚಿತ್ರಗಳು. ಈ ಕ್ಷೇತ್ರದಲ್ಲಿನ ಕೊಳಕು, ನೈತಿಕ ಅಧಃಪತನ ವ್ಯಂಗ್ಯಕಾರರಿಗೆ ಸದಾ ಆಕರ್ಷಣೆಯ ಸರಕಾಗಿದೆ. ಹಿಟ್ಲರ್, ಮುಸಲೋನಿ, ನೆಪೋಲಿಯನ್ ಬೋನೊಪಾರ್ಟೆಯಿಂದ ಹಿಡಿದು ಇಂದಿನ ಕ್ಲಿಂಟನ್, ಒಬಾಮಾ, ಸೋನಿಯಾ ಗಾಂಧಿ, ಮನಮೋಹನ್ ಸಿಂಗ್, ಯಡಿಯೂರಪ್ಪ, ಸದಾನಂದಯ್ಯ, ಸಿದ್ಧರಾಮಯ್ಯ, ಇನ್ನೂ ಅನೇಕ ರಾಜಕೀಯ ವ್ಯಕ್ತಿಗಳು ವ್ಯಂಗ್ಯಚಿತ್ರಕಾರರ ಗೆರೆಗಳಲ್ಲಿ ಪುನರ್ (ಪುನರ್) ಅವತಾರ ಎತ್ತುತ್ತಲೇ ಇದ್ದಾರೆ.

ರಾಜಕೀಯ ವ್ಯಂಗ್ಯಚಿತ್ರಗಳ ಮೂಲ ಹದಿನಾರನೇ ಶತಮಾನದಲ್ಲಿದೆ. ಜರ್ಮನಿಯ ಪುನರ್ ರಚನೆ ಕಾಲದ ರಾಜಕೀಯ ಪರಿಸ್ಥಿತಿ ಇಂಥ ವ್ಯಂಗ್ಯಚಿತ್ರಗಳಿಗೆ ಪ್ರೇರಣೆ ಒದಗಿಸಿತು. ಈ ಸಮಯದಲ್ಲಿ ಒಂದು ಚಳುವಳಿಯ ಸ್ವರೂಪ ರೂಪುಗೊಂಡ ವ್ಯಂಗ್ಯಚಿತ್ರಗಳು ಪ್ರಭುತ್ವದ ಹುಳುಕುಗಳಿಗೆ ಕನ್ನಡಿ ಹಿಡಿಯುವ ಕೆಲಸ ಮಾಡಿದವು. ಅತ್ಯುತ್ತಮ ಜರ್ಮನ್ ವ್ಯಂಗ್ಯಚಿತ್ರಗಳು ರಚನೆಯಾದುದು ಆಗಲೇ. ಹದಿನೆಂಟನೇ ಶತಮಾನದಲ್ಲಿ ಪತ್ರಿಕೋದ್ಯಮದ ಪರಿಣಾಮಕಾರಿ ಭಾಗವಾಗಿ ರಾಜಕೀಯ ಕೇಂದ್ರಿತ ವ್ಯಂಗ್ಯಚಿತ್ರಗಳು ಚಳುವಳಿಗೆ ಹೊಂದಿದವು. ಹೊಗಾರ್ಥ, ರೋಲ್ಯಾಂಡಸನ್, ಗಿಲ್‌ರೇ ಮುಂತಾದವರು. ವ್ಯಂಗ್ಯಚಿತ್ರ ಮತ್ತು ಕ್ಯಾರಿಕೇಚರ್ ರೀತಿಯನ್ನು ಪೋಷಿಸಿದರು. ಇದೇ ಕಾಲದಲ್ಲಿ ಫ್ರಾನ್ಸ್‌ನ ಪಾಮಿಯರ್ ತನ್ನ ವಿಡಂಬನಾತ್ಮಕ ವ್ಯಂಗ್ಯಚಿತ್ರಗಳಿಂದ ಜನಮನ ಸೆಳೆದಿದ್ದ ಎಂಬುವುದು ತಿಳಿದುಬರುತ್ತದೆ.

ಹತ್ತೊಂಬತ್ತನೇ ಶತಮಾನದ ವೇಳೆಗೆ ರಾಜಕಾರಣದ ವ್ಯಂಗ್ಯಚಿತ್ರಗಳು ಪತ್ರಿಕೆಯ ಸಂಪಾದಕೀಯ ಧೋರಣೆಯ ಸ್ಪಷ್ಟ ಭಾಗವಾಗತೊಡಗಿದವು. ಈ ಶತಮಾನದ ಕೊನೆಯ ಭಾಗದಲ್ಲಿ ಅಮೇರಿಕಾದ ಪತ್ರಿಕೆಗಳಲ್ಲಿ ಸಂಪಾದಕೀಯ ವ್ಯಂಗ್ಯಚಿತ್ರಗಳು ಜನಪ್ರಿಯವಾಗ ತೋಡಗಿದವು. ೧೮೭೧,೧೮೭೩ರಲ್ಲಿ ಸಾರ್ವತ್ರಿಕ ಚುನಾವಣೆಗಳ ಮೇಲೂ ಈ ವ್ಯಂಗ್ಯಚಿತ್ರಗಳು ಪ್ರಭಾವ ಬೀರಿದವು. ೧೯೨೨ ರಲ್ಲಿ 'ನ್ಯೂಯಾರ್ಕ್ ವರ್ಲ್ಡ್'ನ ಪ್ರಸಿದ್ಧ ವ್ಯಂಗ್ಯಚಿತ್ರಕಾರ ರೇಲಿನ್ ಕಿರ್ಬಿ ಅವರಿಗೆ ಪ್ರತಿಷ್ಠಿತ 'ಪುಲಿಟ್ಜರ್ ಪ್ರಶಸ್ತಿ' ದೊರೆತದ್ದು ವ್ಯಂಗ್ಯಚಿತ್ರಗಳ ಕಾಲದಲ್ಲಿ ಅವಿಸ್ಮರಣೀಯ ಘಟನೆ ಎನಿಸಿಕೊಂಡಿತು.

ನಿಷ್ಠಾವಂತ ರಾಜಕಾರಣಿ ಇವತ್ತಿನ ರಾಜಕೀಯದಲ್ಲಿ ಈತ ಮತ್ತೆ ಮತ್ತೆ ಕಾಣಸಿಕೊಳ್ಳುತ್ತಿರುವ ಆಸಾಮಿ. ರಾಜಕೀಯ ಪಕ್ಷವೊಂದರ ಹುರಿಯಾಳು. ಆ ಪಕ್ಷಕ್ಕೋ ಅದರ ನಾಯಕನಿಗೋ ನಿಷ್ಠನಾಗಿರಬೇಕಾದ್ದು ಸಹಜವಷ್ಟೆ (ಪಕ್ಷಗಳ ಸಂಖ್ಯೆ ಬೆಳೆದಂತೆ, ವಿವಿಧ ಬಣಗಳ ರಾಜಕಾರಣಿಗಳು ಹೆಚ್ಚಿದಂತೆ ಈ ನಿಷ್ಠೆಯೆನ್ನುವುದು ಸ್ವಹಿತಕ್ಕೆ ಭಾದಕವಾಗದಿದ್ದಾಗ ಮಾತ್ರ ಕಂಡುಬರುವುದುಂಟು). ಕರ್ನಾಟಕದ ಅನೇಕ ರಾಜಕೀಯ ವ್ಯಕ್ತಿಗಳ ಚಿತ್ರಗಳು ಅನೇಕ ಜನ ನುರಿತ ನಮ್ಮ ವ್ಯಂಗ್ಯಚಿತ್ರಕಾರರು ರಚಿಸುವಂತೆ ಪ್ರಸ್ತುತ ರಾಜಕೀಯ ಸ್ಥಿತಿ - ಗತಿಗಳನ್ನು ದಿನ

ನಿತ್ಯ ಪತ್ರಿಕೆಗಳಲ್ಲಿ ನಾವು ವೀಕ್ಷಿಸಬಹುದಾಗಿದೆ. ಅಲ್ಲದೆ ನಮ್ಮ ವ್ಯಂಗ್ಯಚಿತ್ರಕಾರರ ಪ್ರತಿಭೆಯಿಂದ ಸಮಕಾಲೀನ ವಿದ್ಯಮಾನಕ್ಕೊಂದು ಹೊಸ ರೂಪಗಳು ದಿನನಿತ್ಯ ಕಂಡುಬರುತ್ತವೆ.

ವ್ಯಂಗ್ಯಚಿತ್ರಕಾರನ ಪ್ರತಿಭೆಗೆ ಗ್ರಾಸ ಒದಗಿಸುವವರು ನಮ್ಮ ರಾಜಕೀಯ ಹುರಿಯಾಳುಗಳು, ಅಧಿಕಾರಿಗಳು, ಭಾಷಣಕಾರರು ಯಾವುದೇ ಪತ್ರಿಕೆಯನ್ನು ತೆರೆದು ನೋಡಿದರು ನಮ್ಮ ದೇಶದ ರಾಜಕೀಯ ಸ್ಥಿತಿಯನ್ನು ಹಾಗೂ ಪದವಿಗಿರಿಗಳ ಜಗಳಾಟ, ಪಕ್ಷಗಳಲ್ಲಿನ ಭಿನ್ನಮತ, ಕುರ್ಚಿಗಳ ಕಾದಾಟ, ಮಂತ್ರಿಗಳ ದುಂದು ವೆಚ್ಚಗಳ, ಪರಿಹಾರಗಳ ನೆಪದಲ್ಲಿ ಅನೇಕ ರೀತಿಯ ಭ್ರಷ್ಟಾಚಾರವನ್ನು ನಾವು ನೋಡಬಹುದಾಗಿದೆ. ವ್ಯಂಗ್ಯ ಚಿತ್ರನ್ನುವುದು ದೂರುವ, ಅಸಮ್ಮತಿ ತೋರುವ ಕಥೆಯಾದ್ದರಿಂದ ಅದು ಇಂಥವರ ದೌರ್ಬಲ್ಯವನ್ನು, ಅಹಂಕಾರವನ್ನು ಆಸೆಬುರುಕುತನವನ್ನು, ಆತ್ಮವಂಚನೆಯನ್ನು ಅಷಾಡಭೂತಿತನವನ್ನು ಮತ್ತು ಸಾರ್ವಜನಿಕ ವ್ಯಕ್ತಿಗಳಲ್ಲಿ ಒಂದು ದೇಶದ ಜಯಾಪಜಯ, ಅದರ ಪ್ರಜೆಗಳ ನೋವು-ನಲಿವು ಇಂಥವರ ಕೈಯಲ್ಲೇ ಇರುತ್ತವೆಯಲ್ಲವೆ? ಹಾಗಾಗಿ ಈ ಜನರ ಅವಿವೇಕ, ಇವರು ಇಟ್ಟುಕೊಂಡಿರುವ ಆದರ್ಶ, ನೀಡುವ ಆದ್ಯತೆ ಎಸಗುವ ಪ್ರಮಾದ, ಇವೆಲ್ಲವೂ ಜನಸಾಮಾನ್ಯರ ಬದುಕಿನ ಎಷ್ಟೆಲ್ಲಾ ಆಗಾಧ ಪರಿಣಾಮ ಬೀರುತ್ತದೆ. ವ್ಯಂಗ್ಯ ಚಿತ್ರಕಾರರನ ಉದ್ದೇಶ ಇಂಥ ನಾಯಕರನ್ನು ಅಣಕಿಸುವ, ಗೇಲಿಮಾಡುವ, ಚುಚ್ಚುವ, ಟೀಕಿಸುವ ಮೂಲಕ ಪರೋಕ್ಷವಾಗಿ ವ್ಯಂಗ್ಯಚಿತ್ರಗಳು ನಮ್ಮ ವ್ಯಂಗ್ಯಚಿತ್ರಕಲಾವಿದರು ಜನಸಾಮಾನ್ಯರಿಗೆ ತಲುಪಿಸಿ ಅವುಗಳನ್ನು ಒಮ್ಮೆ ನೋಡಿ ನಕ್ಕು ನಮ್ಮ ರಾಜಕೀಯ ಪರಿಸ್ಥಿತಿಯನ್ನು ಅತಿ ಸರಳವಾಗಿ ಅರ್ಥಮಾಡಿಕೊಂಡು ಜನಸಾಮಾನ್ಯರ ಬವಣೆಯನ್ನು ಎತ್ತಿತೋರಿಸುವುದನ್ನು ದಿನ ನಿತ್ಯದ ಪತ್ರಿಕೆಗಳಲ್ಲಿ ಕಾಣಬಹುದಾಗಿದೆ.

ಇತಿಹಾಸದ ಬಗೆಗಾಗಲೀ ರಾಜಕೀಯದ ಬಗೆಗಾಗಲೀ ಬರೆಯುವಾಗ ಅಥವಾ ಯೋಚಿಸುವಾಗ ವ್ಯಕ್ತಿಗಳು, ಅವರ ಅಶೋತ್ತರಗಳು, ಅವರ ಸಂಕಷ್ಟಗಳು ನಮ್ಮ ಪಾಲಿಗೆ ಅಮೂರ್ತವಾಗಿ ಬಿಡುವುದುಂಟು. ವ್ಯಂಗ್ಯ ಚಿತ್ರಕಾರನಾದವನು ಈ ಅಮೂರ್ತತೆಯ ಮೇಲೆ ಬೆಳಕು ಚೆಲ್ಲಿ ಅದು ನಿಜಕ್ಕೂ ಎಂಥ ಘನಘೋರ ವಾಸ್ತವವಾಗಿದೆಯೆಂದು ನಮಗೆ ಮನದಟ್ಟು ಮಾಡಿಕೊಡುತ್ತಾನೆ. ಈ ಕೆಲಸ ನಿಂಧಿಸುವವದಕ್ಕಾಗಿಯೇ ಅವನ ಬತ್ತಳಿಕೆಯಲ್ಲಿ ಬಗೆಬಗೆಯ ಅಸ್ತ್ರಗಳುಂಟು, ಇವುಗಳನ್ನು ಸಮಯವನ್ನು ನೋಡಿಕೊಂಡು ಇವುಗಳನ್ನು ಪ್ರಯೋಗಿಸುವ ಬುದ್ಧಿವಂತಿಕೆಯನ್ನು ನಮ್ಮ ವ್ಯಂಗ್ಯಚಿತ್ರ ಕಲಾವಿದರು ನಿರ್ವಹಿಸುತ್ತಿದ್ದಾರೆ.

ವ್ಯಂಗ್ಯಚಿತ್ರಕಾರನಾದವನು ಸಮಕಾಲೀನ ರಾಜಕೀಯ, ಸಾಮಾಜಿಕ ವಿದ್ಯಮಾನಗಳನ್ನು ಚಿತ್ರಿಸುವುದಕ್ಕಾಗಿ ತನ್ನದೇ ಆದ ಉಪಮೆಗಳನ್ನು ಅಥವಾ ಸಾದೃಶ್ಯಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ರಾಜಕೀಯ ಸನ್ನಿವೇಶಗಳನ್ನು ಅಥವಾ ಪ್ರತಿನಿಧಿ ನಿರ್ಧಾರಗಳನ್ನು ಸಾಂಕೇತಿಕವಾಗಿ ಪಡಿಮೂಡಿಸುಬೇಕೆಂದಾಗ ನಮ್ಮ ವ್ಯಂಗ್ಯ ಚಿತ್ರಕಾರರ ನೆರವಿಗೆ ಬರುವುದು ಪ್ರಾಣಿ ಪ್ರತಿಮೆ, ಹಾಗೇ ನೋಡಿದಂತೆ ಪ್ರತಿಯೊಬ್ಬ ಸಮರ್ಥ ವ್ಯಂಗ್ಯಚಿತ್ರಕಾರನಲ್ಲೂ ಒಂದು ರಾಜಕೀಯ ಮೃಗಾಲಯವೇ ಇರುತ್ತದೆ.

ಹದಿನೆಂಟನೇಯ ಶತಮಾನಕ್ಕೆ ಮೊದಲು ವ್ಯಂಗ್ಯಚಿತ್ರಕಾರನೊಬ್ಬ ತನ್ನ ಸಂವಹನವನ್ನು ಸರಾಗಗೊಳಿಸುವುದಕ್ಕಾಗಿ ತನ್ನದೇ ಪ್ರಾಣಿ, ಪ್ರತೀವೊಂದನ್ನು ಬಳಸಿಕೊಂಡದ್ದು ತೀರ ಅಪರೂಪ. ಈಸೋಪನ

ನೀತಿ ಕತೆಗಳಲ್ಲಿ ಕಥಾ ಸರಿತ್ಸಾಗರದಲ್ಲಿ, ಮಾರೀಚ, ಜಟಾಯು, ಹನುಮಂತ ಮೊದಲಾದ ಪಾತ್ರಗಳಿರುವ ರಾಮಾಯಣದಲ್ಲಿ, ದೇವರ ಅವತಾರಗಳಲ್ಲಿ ಜಾನಪದ ಕಥೆಗಳಲ್ಲಿ ಪ್ರಾಣಿ ಪಕ್ಷಿಗಳೇ ರಾರಾಜಿಸುತ್ತವೆ. ಸಾಹಿತ್ಯ ಸೃಷ್ಟಿಸಿರುವ ಇಂಥ ಕಥಾರೂಪಕಗಳು ಎಲ್ಲ ಭಾಷೇಗಳಲ್ಲೂ ಸಮಾನವಾಗಿರುತ್ತವೆ. ನಾವು ಒಬ್ಬನನ್ನು ಗುಳ್ಳೇನರಿ ಎಂದರೆ ಇನ್ನೊಬ್ಬನನ್ನು ಕತ್ತೆ ಎನ್ನುತ್ತೇವಲ್ಲವೆ? ನಯವಂಚಕನೊಬ್ಬನಿಗೆ ನಾವು ಕೊಡುವ ಬಿರುದು 'ಗೋಮುಖ ವ್ಯಾಘ್ರ'. ಅಂದರೆ ಸಾರ್ವತ್ರಿಕವಾಗಿ ತಿಳಿದಿರುವ ಈ ಅರ್ಥಗಳನ್ನು ಸಾಂಪ್ರದಾಯಿಕ ಪ್ರಾಣಿಕತೆಗಳ ಪ್ರತೀಕಗಳೊಡನೆ ಹೊಂದಿಸುವುದರಲ್ಲೆ ವ್ಯಂಗ್ಯಚಿತ್ರಕಾರನ ಪ್ರತಿಭೆಯಿದೆ. ಅವನಿಗೆ ರಾಷ್ಟ್ರ ಲಾಂಛನಗಳೆನಿಸಿದ ಬ್ರಿಟನ್ನಿನ ಸಿಂಹಾಸನ ಅಮೇರಿಕದ ಹದ್ದು, ರಷ್ಯಾದ ಕರಡಿ, ಭಾರತದ ನವಿಲು ಆಯಾ ರಾಷ್ಟ್ರಗಳ ಧ್ಯೇಯಧೋರಣೆಗಳನ್ನೂ ಪ್ರಸಾರಪಡಿಸುವ ಸಂಕೇತಗಳಾಗುತ್ತವೆ. ವ್ಯಂಗ್ಯಚಿತ್ರಕಾರ ಇಂಥ ಸಂಕೇತಗಳನ್ನು ಬಳಸಿಕೊಂಡು ನಮ್ಮ ಕಾಲದ ವಸ್ತುಸ್ಥಿತಿಯನ್ನು ತನ್ನದೇ ವಿಶಿಷ್ಟ ರೀತಿಯಲ್ಲಿ ಧ್ವನಿಸುತ್ತಾನೆ.

ಇಂದು ಮನುಷ್ಯನ್ನು ಪ್ರಾಣಿಗಳಂತೆ, ಪ್ರಾಣಿಗಳನ್ನು ಮನುಷ್ಯರಂತೆ ಲೀಲಾಜಾಲವಾಗಿ ಚಿತ್ರಿಸುವ ವ್ಯಂಗ್ಯಚಿತ್ರಕಾರನಿಗೆ ಬಹು ಹಿಂದೆಯೇ ಮನುಷ್ಯನ ಮುಖಕ್ಕೂ ಪ್ರಾಣಿಯ ಮೋರೆಗೂ ಎಂಥ ಹೋಲಿಕೆಯಿದೆಯೆಂದು ಗೊತ್ತಿತ್ತು. ಇಂತಹ ಚಿತ್ರಗಳನ್ನು ಚಿತ್ರಗಳ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ.

**ರಾಜಕೀಯ ವ್ಯಂಗ್ಯಚಿತ್ರಗಳು**

೧. ನಮ್ಮ ರಾಜಕೀಯ ವ್ಯಕ್ತಿಗಳು ಅವಧಿ ಮುಗಿಯುತ್ತಿದ್ದಂತೆ ಮುಂದಿನ ಚುನಾವಣೆಯನ್ನು ಯಾವ ರೀತಿಯಾಗಿ ಅದನ್ನು ಗೆಲ್ಲಬೇಕು ಎಂಬ ಚಿಂತೆಯಿಂದ ತಮ್ಮನ್ನು ತಾವು ಮರೆತುಬಿಟ್ಟು ಸದಾಕಾಲ ಅದರ ಚಿಂತೆಯಲ್ಲಿರುತ್ತಾರೆ ಎಂಬುದನ್ನು ಈ ಚಿತ್ರದಲ್ಲಿದೆ ಅಂತೆಯೇ ಇದನ್ನು ಇನ್ನೊಬ್ಬರ ಮುಖಾಂತರ ಚುನಾವಣೆಯ ಚಿಂತೆನ್ನು ಬಿಟ್ಟು ಇನ್ನೂ ಮುಂದೆ ಆದರೂ ಇವತ್ತಿನ ಅಮೂಲ್ಯವಾದ ಜೀವನದ ಬಗ್ಗೆ ಯೋಚಿಸಿ ಎಂಬುದನ್ನು ನಮ್ಮ ರಾಜಕಾರಣಕ್ಕೆ ತಿಳಿಹೇಳವುದಾಗಿದೆ.

೨. ಈ ಚಿತ್ರದಲ್ಲಿ ನಮ್ಮ ರಾಜಕೀಯ ಆರ್ಥಿಕ ವ್ಯವಸ್ಥೆಯ ಬಗ್ಗೆ ಚನ್ನಾಗಿ ಹಾಸ್ಯಾಸ್ಪದವಾಗಿ ಚಿತ್ರಿಸಲಾಗಿದೆ. ಇಲ್ಲಿ ವಿಧಾನ ಸಭೆ ಅಧಿವೇಶನಗಳು ಅಂಥ ಸಂಭ್ರಮವನ್ನು ಆಚರಿಸಿಕೊಳ್ಳುವುದರ ಸಂದರ್ಭದಲ್ಲಿ ಈ ಅಧಿವೇಶನಕ್ಕಾಗಿ ಸಾಕಷ್ಟು ಖರ್ಚುವೆಚ್ಚಗಳು ಬರುತ್ತವೆ. ಇಂತಹ ಖರ್ಚುವೆಚ್ಚ ಸಂದರ್ಭದಲ್ಲಿ ತಮಗೆ ಬೇಕಾಗದಷ್ಟು ಹಣವನ್ನು ಬಿಡುಗಡೆ ಮಾಡಿಕೊಂಡು ಇದೇ ಸಂದರ್ಭದಲ್ಲಿ ಹಣವನ್ನು ಲೂಟಿಮಾಡುವಂತಹ ಸನ್ನಿವೇಶವನ್ನು ನಾವು ಈ ಚಿತ್ರದ ಮುಖಾಂತರ ಗುರುತಿಸಬಹುದಾಗಿದೆ.

೩. ಈ ಚಿತ್ರದಲ್ಲಿ ನಮ್ಮ ರಾಜಕೀಯ ಭವಿಷ್ಯವನ್ನು ಜೋತಿಷ್ಯರ ಹತ್ತಿರ ಹೋಗಿ ಕೆಲವು ಕಟ್ಟಳೆಗಳನ್ನೊ ಅಥವಾ ಅವರು ಹೇಳಿದಂತ ಉಂಗುರುಗಳು ಕೆಲವು ಮುತ್ತು ಹರಳುಗಳನ್ನು ಹಾಕಿಕೊಳ್ಳುವುದು ಸಾಮಾನ್ಯವಾಗಿದೆ. ಅಲ್ಲದೆ ತಮ್ಮ ಸರಕಾರವು ಮುಗಿದುಹೋಗುವ ಅವಧಿಗೋ ಅಥವಾ ಮತ್ತೆ ತಮ್ಮ ಸರಕಾರವು ಅಥವಾ ತಾವುಗಳು ರಾಜಕೀಯ ಪ್ರವೇಶಕ್ಕಾಗಿಯೋ ಇಂತವುಗಳನ್ನು ಮಾಡುವುದು ಮಾಮೂಲಾಗಿದೆ. ಅಲ್ಲದೆ ಕೆಲವು ದೇವರುಗಳಿಗೆ ಅರ್ಪಿಸಿ ಅಭಿಷೇಕಗಳನ್ನು ಮಾಡಿಸುವುದನ್ನು ಇವತ್ತಿನ ಸಂದರ್ಭದಲ್ಲಿ ಕಾಣಬಹುದಾಗಿದೆ.

ಇವೆಲವನ್ನು ಮಾಡಿದಮೇಲೆ ರಾಜಕೀಯ ವ್ಯಕ್ತಿಗಳ ಕಷ್ಟಗಳು ದೂರವಾಗಿದ್ದಾಗ ಈ ಚಿತ್ರದಲ್ಲಿ ಕೊನೆಗೆ ತಮ್ಮ ಮೀಸೆಗಳನ್ನು ತೆಗೆಸಿಕೊಂಡರೆ ನಿಮ್ಮ ಅದೃಷ್ಟವನ್ನು ಬದಲಾಯಿಸಬಹುದೆನ್ನುವುದನ್ನು ಈ ಚಿತ್ರದಲ್ಲಿ ನಮ್ಮ ವ್ಯಂಗ್ಯಚಿತ್ರ ಕಲಾವಿದ ಬಹಳ ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಅಲ್ಲದೆ ಚಿತ್ರದಲ್ಲಿ ರಾಜಕೀಯದವರು ಎಷ್ಟೇ ಪೂಜೆಕಾರ್ಯ ಜೋತಿಷ್ಯರು ಹೇಳಿದನ್ನೆಲ್ಲ ಮಾಡಿದರು ಸಹ ತಮ್ಮ ಅಧಿಕಾರವನ್ನು ಮತ್ತೆ ಗಳಿಸಿಕೊಳ್ಳಲಿಲ್ಲ ಎಂಬುದನ್ನು ಈ ಚಿತ್ರದ ಹಾಸ್ಯಾಸ್ಪದವಾಗಿರುವುದು ನಾವು ನೋಡಬಹುದಾಗಿದೆ.

೪. ಇವತ್ತಿನ ದಿಮಾನಗಳಲ್ಲಿ ಮಳೆಯು ಜಾಸ್ತಿಯಾಗುತ್ತಿಲ್ಲ ಇದರಿಂದ ನಮ್ಮ ಭೂಮಿಯ ತಾಪಮಾನವು ಹೆಚ್ಚುತ್ತಿದೆ. ಅಲ್ಲದೆ ಮಳೆ ನೀರು ಸಂಪೂರ್ಣವಾಗಿ ಹರಿದು ಸಮುದ್ರದ ಪಾಲಾಗುತ್ತಿದೆ. ಈ ಸಮುದ್ರದ ನೀರು ಯಾವುದನ್ನು ಉಪಯೋಗವಿಲ್ಲದಾಗಿದೆ. ಅದಕ್ಕಾಗಿ ಮಳೆನೀರನ್ನು ಭೂಮಿಗೆ ಇಂಗುವಂತೆ ಮಾಡಬೇಕೆಂಬುದು ನಮ್ಮ ವಿಜ್ಞಾನದ ಸಮೀಕ್ಷೆ ಮೇರೆಗೆ ತಿಳಿದು ಬಂದ ವಿಷಯವಾಗಿದೆ. ಅಂತೆ ಇಂದಿನ ನಮ್ಮ ರಾಜಕೀಯ ವ್ಯಕ್ತಿಗಳ ನಮ್ಮ ರಾಜ್ಯವನ್ನು ಯಾವ ರೀತಿಯಾಗಿ ಸಂರಕ್ಷಣೆಮಾಡುತ್ತಿರುವರು ಎಂಬುದಕ್ಕೆ ಉದಾಹರಣೆಯಾಗಿದೆ. ಈ ಚಿತ್ರದಲ್ಲಿ ಇದನ್ನೆ ನಮ್ಮ ವ್ಯಂಗ್ಯ ಚಿತ್ರಕಲಾವಿದರು ಇದಕ್ಕೆ ವಿರುದ್ಧ ರೀತಿಯಲ್ಲಿ ಇಂದಿನ ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ ನಮ್ಮ ಸಾರಿಗೆ ವ್ಯವಸ್ಥೆಯ ಗುಂಡಿಗಳ ಮಧ್ಯೆ ರೋಡು ಅಥವಾ ರೋಡ್‌ಗಳ ಮದ್ಯೆಗುಂಡಿಯೋ ಎನ್ನುವಂತಾಗಿದೆ. ಅಂತೆಯೇ ಈ ಚಿತ್ರದಲ್ಲಿ ಮಳೆ ಇಂಗುಗುಂಡಿಗಳನ್ನು ಮತ್ತೆ ಕೂಲಿ ಕೊಟ್ಟು ಅವುಗಳನ್ನು ಏಕೆ ತೆಗಿಸಬೇಕು ನಮ್ಮ ರೋಡ್‌ಗಳ ಮದ್ಯೆಯೇ ಬಿದ್ದಿರುವ ಗುಂಡಿಗಳಿಂದ ಮಳೆ ನೀರು ಇಂಗುತ್ತದೆ ಅಲ್ಲವೆ ಎಂಬುದನ್ನು ಈ ಚಿತ್ರದಲ್ಲಿ ಹಾಸ್ಯಾಸ್ಪದವಾಗಿ ಚಿತ್ರಿಸಲಾಗಿದೆ.

೫. ಈ ಚಿತ್ರದಲ್ಲಿ ಇವತ್ತಿನ ರಾಜಕೀಯ ವ್ಯಕ್ತಿಗಳನ್ನು ನಮ್ಮ ದೇಶವನ್ನು ಆಳಬೇಕಾದವರು ತಮಗೆ ಇಚ್ಛೆ ಬಂದಂತಹ ರೀತಿಯಲ್ಲಿ ಕೆಲವಾರು ವಿಮಾನಗಳಲ್ಲಿ ತಮಗೆ ಬೇಕಾಗುವಂತಹ ಸ್ಥಳಗಳಿಗೆ ಪ್ರವಾಸವನ್ನು ಕೈಗೊಳ್ಳುತ್ತಾರೆ. ಅಲ್ಲದೆ ರಾಜ್ಯದ ಜನತೆ ಮಳೆಯಿಲ್ಲದೆ ಕುಡಿಯಲು ನೀರು ಇಲ್ಲದೆ ಬರಪರಿಸ್ಥಿತಿಯಿಂದ ಕಂಗಾಲಾಗಿದೆ. ಇಂತಹ ಸಂದರ್ಭದಲ್ಲಿ ಒಳ್ಳೆಯ ಹೋಟೆಲ್‌ಗಳಲ್ಲಿ ನಮ್ಮ ಶಾಸನಕರು ಐಶಾರಾಮಿ ಬದುಕಿನೊಂದಿಗೆ ಬದುಕುತ್ತಿದ್ದಾರೆ. ಅಂತೆಯೇ ಈ ಚಿತ್ರದಲ್ಲಿ ಇವತ್ತಿನ ನಮ್ಮ ಹೊಲಸು ರಾಜಕೀಯವನ್ನು ಶಾಸಕರನ್ನು ತಾವು ಬದುಕುತ್ತಿರುವ ಐಶಾರಾಮಿ ಜೀವನವನ್ನು ಈ ಚಿತ್ರದಲ್ಲಿ ಬಹಳ ಚೆನ್ನಾಗಿ ಸನ್ನವೇಶದೊಂದಿಗೆ ಚಿತ್ರಿಸಿದ್ದಾರೆ.

೬. ಈ ಚಿತ್ರದಲ್ಲಿ ನಮ್ಮ ರಾಜಕಾರಣಿಗಳು ಆಶ್ವಾಸನೆ ಮಾತುಗಳಾಗಿ ಮಾತ್ರ ಉಳಿಯುತ್ತಿವೆ. ಹೊರತು ಅವುಗಳನ್ನು ಕಾರ್ಯರೂಪಕ್ಕೆ ತರುತ್ತಿಲ್ಲವೆಂಬುದನ್ನು ಮತ್ತು ಅವರ ಭಾಷಣವನ್ನು ಇವತ್ತಿನ ದಿನಗಳಲ್ಲಿ ಜನರು ಇವರುಗಳ ಮಾತುಗಳನ್ನು ಕೇಳುತ್ತಿಲ್ಲವೆಂದು ಈ ಚಿತ್ರದಲ್ಲಿ ತಿಳಿಸುವ ಪ್ರಯತ್ನವಾಗಿದೆ. ಇವರುಗಳು ಭಾಷಣವನ್ನು ಕೇಳಲು ಜನರನ್ನು ಬಲವಂತವಾಗಿಯಾದರೂ ತಮ್ಮ ಭಾಷಣವನ್ನು ಕೇಳಲು ಅದಕ್ಕಾಗಿ ಬಂದ ಜನರನ್ನು ಯಾರು ಹೊರಗೆ ಹೋಗದಂತೆ ಅವರುಗಳಿಗೆ ಪೋಲಿಸ್ ಕಾವಲನ್ನು ಹಾಕುವಂತೆ ಇಂದಿನ ನಮ್ಮ ರಾಜಕಾರಣಿಗಳ ಆಳ್ವಿಕೆಯನ್ನು ಎಷ್ಟರಮಟ್ಟಿಗೆ ಜನಸಾಮಾನ್ಯರ ಮೇಲೆ ಪ್ರಭಾವ ಬೀರಿವೆ ಎಂಬುದು ಈ ಚಿತ್ರದಲ್ಲಿ ತಿಳಿಸುವ ಪ್ರಯತ್ನವಾಗಿದೆ.

೭. ಈ ಚಿತ್ರದಲ್ಲಿ ಇಂದಿನ ರಾಜಕೀರಣಿಗಳು ಕೆಲಸವಿಲ್ಲದೆ ಯಾವ ರೀತಿಯ ಅಭಿವೃದ್ಧಿಯ ಕಾರ್ಯಕ್ರಮಗಳನ್ನು ಮಾಡಿ ಸುಮ್ಮನೆ ಹಣವನ್ನು ಸಿಕ್ಕ ರೀತಿಯಲ್ಲಿ ಲೂಟಿಮಾಡಿ ತಮಗೆ ಬೇಕಾದಷ್ಟು ಅಂತಸ್ತನ್ನು ಮಾಡಿಕೊಂಡು ತಮ್ಮ ದೇಹವನ್ನು ಕೊಂಬಿನಾಂಶದಿಂದ ಬೆಳೆಸಿಕೊಳ್ಳುತ್ತಿರುವುದು ನಾವು ಇವತ್ತಿನ ರಾಜಕಾರಣೀಯ ವ್ಯಕ್ತಿಗಳನ್ನು ನೋಡಬಹುದಾಗಿದೆ. ಅಂತೆಯೇ ಈ ಚಿತ್ರದಲ್ಲಿ ರಾಜಕಾರಣಿಯೊಬ್ಬರು ಬಟ್ಟೆಯ ಟೈಲರನ್ನು ಬಟ್ಟೆಯ ಅಳತೆಯನ್ನು ತೆಗೆದುಕೊಳ್ಳುವ ಸಂದರ್ಭಕ್ಕೆ ನಮ್ಮ ರಾಜಕಾರಣಿಗಳ ಕೊಬ್ಬಿದ ತಮ್ಮ ದೇಹವನ್ನು ಹಾಸ್ಯವಾಗಿ ತೋರಿಸಲಾಗಿದೆ.

೮. ಈ ಚಿತ್ರದಲ್ಲಿ ನಮ್ಮ ಸಮಾಜದಲ್ಲಿ ಭ್ರಷ್ಟ ವ್ಯವಸ್ಥೆ ಎಷ್ಟರ ಮಟ್ಟಿಗೆ ಹೆಮ್ಮರವಾಗಿ ಬೆಳೆದು ನಿಂತಿರುವುದನ್ನು ತೋರಿಸಲಾಗಿದೆ. ಲೋಕಾಯುಕ್ತ ಎಂಬ ಕೊಡ್ಡಲಿಯಿಂದ ಎಷ್ಟು ಕಡಿದರು ಇದರ ಬೇರು ಸಮೇತ ಕಿತ್ತೊಗೆಯಲು ಆಗುತ್ತಿಲ್ಲವೆಂಬುದು ಗಮನಾರ್ಹ. ಇವತ್ತಿನ ದಿನಗಳಲ್ಲಿ ಯಾವ ಕಛೇರಿಗಳು, ಸಂಸ್ಥೆಗಳು ಇಲಾಖೆಗಳು, ಶಿಕ್ಷಣದಲ್ಲೂ ವೈದ್ಯಕೀಯ ಕ್ಷೇತ್ರದಲ್ಲೂ ಸಹ ಈ ಭ್ರಷ್ಟಚಾರವು ನಿಯಂತ್ರಿಸಲು ಆಗುತ್ತಿಲ್ಲವೆಂಬುದನ್ನು ಈ ಚಿತ್ರದಲ್ಲಿ ಚಿತ್ರಿಸಲಾಗಿದೆ. ನಮ್ಮ ಲೋಕಾಯುಕ್ತರು ಇದನ್ನು ನಿರ್ಮೂಲನೆ ಮಾಡಲು ಹೊದರು ಅದು ಅಷ್ಟೇ ಎತ್ತರಕ್ಕೆ ಬೆಳೆಯುತ್ತಿದೆ ಎಂಬುದು ಈ ವ್ಯಂಗ್ಯಚಿತ್ರದಲ್ಲಿದೆ.

೯. ಈ ಚಿತ್ರದಲ್ಲಿ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ಎಷ್ಟೋವರ್ಷಗಳಾದರೂ ನಮ್ಮ ದೇಶದ ಸ್ಥಿತಿ ಮಾತ್ರ ಬದಲಾಗುತ್ತಿಲ್ಲ. ಎಷ್ಟೋ ಜನರಿಗೆ ಮೂಲ ಸೌಕರ್ಯಗಳನ್ನು ಸಹ ನಮ್ಮ ರಾಜಕೀಯ ವ್ಯಕ್ತಿಗಳು ಇದನ್ನು ನಮ್ಮ ಪ್ರಜೆಗಳಿಗೆ ಸಿಗುವಂತೆ ಮಾಡುತ್ತಿಲ್ಲ. ನಮ್ಮ ಸಮಾಜ ನಿರ್ಗತಿಕ ವರ್ಗದವರ ಮೇಲೆ ಕೂತುಕೊಂಡು ತಮ್ಮ ಆಡಳಿತ ಅವಧಿಯಲ್ಲಿ ಕೆಲವು ಮೂಲ ಸೌಕರ್ಯಗಳಾದ ವಸತಿ ಶಿಕ್ಷಣ. ಬಟ್ಟೆ ಇನ್ನೂ ಕೆಲವು ಮೂಲ ಸೌಕರ್ಯಗಳನ್ನು ತಕ್ಕಡಿಯಂತೆ ತೂಕುತ್ತಿರುವುದನ್ನು ನೋಡು ನೋಡುತ್ತಲೆ ಕೆಲವು ಆಶ್ವಾಸನೆಗಳನ್ನು ಕೊಟ್ಟು ಇವುಗಳ ಉಪಯೋಗವನ್ನು ಸಿಗದಂತೆ ಜನರಿಗೆ ಬರಿ ಮೋಸಮಾಡುತ್ತಿರುವುದನ್ನು ಈ ಚಿತ್ರದಲ್ಲಿ ಇಂದಿನ ನೈಜ ಸ್ಥಿತಿಯ ಬಗ್ಗೆ ಇಲ್ಲಿ ಚಿತ್ರಿಸಲಾಗಿದೆ. ನಮ್ಮ ಪ್ರಜೆಗಳಿಂದಲೆ ಗೆದ್ದು ಗದ್ದಿಗೆ ಏರಿದ ರಾಜಕೀಯ ವ್ಯಕ್ತಿಗಳ ಒಟ್ಟಾರೆಯ ವ್ಯಕ್ತಿತ್ವವನ್ನು ಈ ಚಿತ್ರದಲ್ಲಿ ತೋರಿಸುವ ಪ್ರಯತ್ನವನ್ನು ಮಾಡಲಾಗಿದೆ.

೧೦. ಈ ಚಿತ್ರದಲ್ಲಿ ಇವತ್ತಿನ ದಿನಗಳಲ್ಲಿ ಕೆಲವು ರಾಜಕಾರಣಿಗಳು ಒಂದಲ್ಲಾ ಒಂದು ರೀತಿಯ ತಪ್ಪುಗಳನ್ನು ಮಾಡಿ ಜೈಲ್ ಸೇರುತ್ತಿದ್ದಾರೆ. ಜೈಲಿನಲ್ಲಿ ಅನೇಕ ಜನ ಕಳ್ಳರು. ಮೋಸಗಾರರು ಇರುವಂತಹ ಸ್ಥಳಗಳಾಗಿವೆ. ಆದರೆ ಏನೇ ತಪ್ಪು ಮಾಡಿದರು ಸಹ ಎಲ್ಲರು ಹೋಗುವುದು ಜೈಲಿಗೆ ಎನ್ನುವುದನ್ನು ಇಲ್ಲಿ ತೋರಿಸಲಾಗಿದೆ.

೧೧. ಈ ಚಿತ್ರದಲ್ಲಿ ನಮ್ಮಿಂದ ಹಾರಿಸಿ ಬಂದಂತಹ ರಾಜಕೀಯ ವ್ಯಕ್ತಿಗಳು ಅನೇಕ ರೀತಿಯ ಆಶ್ವಾಸನೆಗಳನ್ನು ಕೊಡುತ್ತಾರೆ. ಇವತ್ತಿನ ದಿನಗಳ ಕಛೇರಿಗಳಲ್ಲಿ ಲಂಚವಿಲ್ಲದೆ ಯಾವ ಕೆಲಸವು ನಡೆಯುವುದಿಲ್ಲ ನಮ್ಮ ರಾಜಕೀಯ ವ್ಯಕ್ತಿಗಳಿಗೂ ಗೊತ್ತಿರುವಂತಹ ವಿಷಯವಾಗಿವೆ. ಚುನಾಹಿಸಿ ಬಂದಂತಹ ಎಲ್ಲ ರಾಜಕಾರಣಿಗಳು ಸಹ ಎಷ್ಟೆಲ್ಲಾ ಬೇಡಿಕೆಗಳನ್ನು ನೀಡುತ್ತಾರೆ. ಅಂತಹ ಕೆಲವು ಬೇಡಿಕೆಗಳನ್ನು ಲಂಚದ ಬಗ್ಗೆ ಇಲ್ಲಿ ಒಂದು ರೀತಿ ಹಾಸ್ಯಾಸ್ಪದವಾಗಿ ಇಲ್ಲಿ ತೋರಿಸಲಾಗಿದೆ.

೧೨. ಇವತ್ತಿನ ದಿನಗಳಲ್ಲಿ ವರ್ಷಕ್ಕೊಂದು ಸರಕಾರವು ನಮ್ಮ ರಾಜ್ಯವನ್ನು ಆಳುತ್ತಿವೆ. ಯಾವ ಸರಕಾರಗಳು ಆಳ್ವಿಕೆಯಲ್ಲಿರುತ್ತವೆಯೋ ಹಿಂದಿನ ಸರಕಾರಗಳ ತಪ್ಪುಗಳನ್ನು ತೋರಿಸುವುದು ಇಲ್ಲಿ ಇವರ ತಪ್ಪುಗಳನ್ನು ಇನ್ನೊಂದು ಸರಕಾರಗಳು ತೋರಿಸಿರುವುದನ್ನು ಈ ಚಿತ್ರದಲ್ಲಿ ಚಿತ್ರಿಸಲಾಗಿದೆ.

**ಸಾಮಾಜಿಕ ವ್ಯಂಗ್ಯಚಿತ್ರಗಳು**

ಪ್ರಾಣಿ ಜಗತ್ತಿನಲ್ಲಿ ನಗಬಲ್ಲ ಪ್ರಾಣಿಯೆಂದರೆ ಮನುಷ್ಯಮಾತ್ರ ಅದೇ ರೀತಿ ಅಸಮಾನತೆಯ ಪಟ್ಟು ಹಿಡಿಯುವ ಪ್ರಾಣಿ ಕೂಡ ಮನುಷ್ಯ ಮಾತ್ರ ಇನ್ನೊಂದು ವೈಶಿಷ್ಟ್ಯವೆಂದರೆ, ವ್ಯಂಗ್ಯದ ನಗು ಪಸರಿಸುವಂತದ್ದು ಈ ಸಮಾನತೆಯೇ ಹೀಗಂದಿದ್ದರು. ಭಾರತದ ಪ್ರಖ್ಯಾತ ವ್ಯಂಗ್ಯ ಚಿತ್ರಕಾರ ಅಮ ಅಬ್ರಹಾಂ ಬಹುಶಃ ಅಣಕ ಅಥವಾ ವ್ಯಂಗ್ಯ ಮಾನವ ಸಮಾಜದಲ್ಲಿ ಅಸಮಾನತೆ ಹಣಿಕೆ ಹಾಕಿದಂದಿನಿಂದಲೂ ಮನುಕುಲದ ಬೆಳವಣಿಗೆಯ ಅವಿಭಾಜ್ಯ ಅಂಗವಾಗಿಯೇ ಬಂದಿದೆ. ವ್ಯಂಗ್ಯ ಚಿತ್ರಮಾತ್ರ ಆಧುನಿಕ ಜಗತ್ತಿನ ಉತ್ಪನ್ನ ಈಗಂತಲೂ ಅದು ಪತ್ರಿಕೆಗಳಲ್ಲಿ ಮಾತ್ರವಲ್ಲ. ಪ್ರಜಾಪ್ರಭುತ್ವದಲ್ಲಿಯೂ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿದೆ. Oppostional Space ಅಂದರೆ ವಿರೋಧದ ಅವಕಾಶ ಕೆಲವೊಮ್ಮೆ ಈ ವಿರೋಧದಲ್ಲೂ ಪ್ರಕಟಿಸುವ ಪತ್ರಿಕೆಯ ನಿಲುವಿಗೂ ವಿರುದ್ಧವಾಗಿ ಕಂಡುಬಂದರೆ ಆಶ್ಚರ್ಯಪಡಬೇಕಾಗಿಲ್ಲ. ಹೀಗೆ ವ್ಯಂಗ್ಯಚಿತ್ರಕಾರರು ಅಥವಾ ಕಾರ್ಟೂನಿಸ್ಟರದ್ದು ನಮ್ಮ ಸಮಾಜದ ಒಂದು ವಿಶಿಷ್ಟ ಪಾತ್ರವನ್ನು ವಹಿಸಿಕೊಂಡು ಇದನ್ನು ಬೆಳೆಸುತ್ತಿದ್ದಾರೆ.[೪]

'ವ್ಯಂಗ್ಯ ಚಿತ್ರಕಾರರು ಬಂಡಾಯ ನೆಲೆಯ ಚಿಂತನೆಯನ್ನು ಹೊಂದಿದು ಕಲೆಯನ್ನು ಪ್ರತಿಭಟನೆಯ ಅಸ್ತ್ರವಾಗಿ ಸಮರ್ಥವಾಗಿ ಪ್ರಯೋಗಿಸಿದ ಪರಂಪರೆಯನ್ನು ಉಳ್ಳವರಾಗಿದ್ದಾರೆ. ಒಂದು ರೀತಿಯಲ್ಲಿ ವ್ಯಂಗ್ಯ ಚಿತ್ರಕಾರರು ನಿಜವಾದ ಜವಾಬ್ದಾರಿಯಂತ ಜನವಾದಿ ಕಲಾವಿದರು' ಕರ್ನಾಟಕದಲ್ಲಿ ಇಂತಹ ವಿಶಿಷ್ಟ ಪಾತ್ರವನ್ನು ವಹಿಸಿರುವವವರಲ್ಲಿ ಅಗ್ರಗಣ್ಯರೆಂದರೆ ತಪ್ಪಾಗದು. ಸಾಕಷ್ಟು ನಮ್ಮ ಕರ್ನಾಟಕದಲ್ಲಿ ವ್ಯಂಗ್ಯಚಿತ್ರಕಲಾವಿದರು ವ್ಯಂಗ್ಯಚಿತ್ರಗಳನ್ನು ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಹಾಸ್ಯದ ಹೆಸರಿನಲ್ಲಿ ಚಿತ್ರಗಳನ್ನು ರಚಿಸುತ್ತಿದ್ದಾರೆ. ಆದರೆ ರಾಜಕೀಯ ವ್ಯಂಗ್ಯಚಿತ್ರಗಳಿಂದಲೂ ಸ್ವಲ್ಪ ಕಡಿಮೆ ಅದರಲ್ಲೂ ನಿದಿಷ್ಟವಾದರೆ, ಜನಪರವಾದ ಪ್ರಜಾಸತ್ತಾತ್ಮಕ ನಿಲುವು ಅಪರೂಪವೇ. ಆದರೆ ನಮ್ಮ ಕರ್ನಾಟಕದಲ್ಲಿ ಇಂತಹ ಅಪರೂಪದ ವ್ಯಂಗ್ಯಚಿತ್ರಕಾರರು ಪ್ರತಿದಿನ ಮುಂಜಾನೆ ಪತ್ರಿಕೆಗಳನ್ನು ಕೈಗೆತ್ತಿಕೊಂಡಾಗ ಓದುಗರ ಕಣ್ಣು ತಮಗರಿವಿಲ್ಲದೆಯೇ ಮೊದಲು ಹುಡುಕುವುದು ಕಾರ್ಟೂನನ್ನು ನಮ್ಮ ಕರ್ನಾಟಕದ ವ್ಯಂಗ್ಯಚಿತ್ರಕಲಾವಿದರು ರಾಜಕೀಯ, ಸಾಮಾಜಿಕ ಮತ್ತು ಹಾಸ್ಯಪ್ರಧಾನವಾಗಿ ಅಲ್ಲದೆ ಸಮರ್ಥವಾಗಿ, ಮಾರ್ಮಿಕವಾಗಿ ಮತ್ತು ಸುಂದರವಾಗಿಯೂ ಬಿಂಬಿಸುತ್ತಿರುವವರು. ಅಲ್ಲದೆ ಕೆಲವು ವ್ಯಂಗ್ಯಚಿತ್ರಗಳನ್ನು ನೋಡಿದ ದಿನದೊಂದಿಗೇ ಕಣ್ಮರೆಯಾದರೆ ಸದಾ ಕಣ್ಮುಂದೆ ಇರುವಂತೆ, ಕರ್ನಾಟಕದ ವ್ಯಂಗ್ಯಚಿತ್ರಕಲೆ ಒಂದು ಸಾಂಸ್ಕೃತಿಕ ದಾಖಲೆಯಾಗುವಂತೆ ಇದನ್ನು ಮುಂದುವರೆಸಿಕೊಂಡು ಬೆಳೆಸುತ್ತಿದ್ದಾರೆ.

---

೦೪. ಪಿ. ಮಹಮ್ಮದ್ : ವ್ಯಂಗ್ಯ (ವಿ) ಚಿತ್ರ ಸಂಕಲನ ; ಪುಟ ಸಂಖ್ಯೆ-೩

ಸಾಮಾಜಿಕ ವ್ಯಂಗ್ಯಚಿತ್ರಗಳು ಒಟ್ಟಾರೆಯಾಗಿ ನಮ್ಮ ಸುತ್ತಲಿನ ದಿನದಿನವೂ ಅಂದಂದಿಗೆ ಪಸ್ತುತವಾದ ಘಟನೆಗಳನ್ನು ಆಧಾರವಾಗಿಟ್ಟುಕೊಂಡು ವ್ಯಂಗ್ಯಚಿತ್ರಗಳನ್ನು ರಚಿಸುತ್ತಾರೆ. ಉದಾಹರಣೆಗೆ ನಮ್ಮ ದಿನಿತ್ಯವಾಗಿ ಬಳಸುವಂತಹ ವಸ್ತುಗಳ ಬೆಲೆ ಜಾಸ್ತಿ, ವಿದ್ಯುತ್ ಕಡಿತ, ಶಿಕ್ಷಣಕ್ಕೆ ಸಂಬಂಧಿಸಿದಂತೆ, ತರಕಾರಿಗಳಿಗೆ ಸಂಬಂಧಿಸಿಂದತೆ, ಸಾರಿಗೆ ಸಂಪರ್ಕಗಳ ಬಗ್ಗೆ ಅಲ್ಲದೆ ಕೆಲವು ವಸ್ತುಗಳ ಬೆಲೆ ಏರಿಕೆ ಅಲ್ಲದೆ ನಮ್ಮ ದಿನಿತ್ಯದ ಬದುಕಿಗೆ ಬೇಕಾಗುಂತಹ ಒಟ್ಟಾರೆ ವಸ್ತುಗಳನ್ನು ಆಧಾರವಾಗಿಟ್ಟುಕೊಂಡು ವ್ಯಂಗ್ಯಚಿತ್ರಕಲಾವಿದರು ಕಂಡದ್ದನ್ನು, ಕೇಳಿದ್ದನ್ನು, ಓದಿದ್ದನ್ನು ಮನಸ್ಸಿನೊಳಗೆ ಮಥನಮಾಡಿ ಅದಕ್ಕೊಂದು ಅನಿರೀಕ್ಷಿತವೂ ವ್ಯಂಗ್ಯವೂ ಆದ ರೂಪವನ್ನು ಕೊಟ್ಟು ನೋಡಿದವರಿಗೆ ಮನಸ್ಸಿನಲ್ಲಿ ಮೂಡಿಸುವ ಈ ಕೆಲಸ ಪಾದರಸದಂತೆ ತೀಕ್ಷ್ಣವಾದ ಬುದ್ಧಿಶಕ್ತಿಯಿಂದ ವ್ಯಂಗ್ಯಚಿತ್ರಗಳನ್ನು ರಚಿಸುತ್ತಾರೆ. ಅಲ್ಲದೆ ಸಾಮಾಜಿಕ ವ್ಯಂಗ್ಯಚಿತ್ರಗಳಿಂದ ನಮ್ಮ ಸುತ್ತಲಿನ ಸಮಸ್ಯೆಗಳ ಬಗ್ಗೆ ತಿಳಿಸುವ ಪ್ರಯತ್ನ ಈ ಚಿತ್ರಗಳದ್ದಾಗಿರುತ್ತದೆ.

೧. ನಮ್ಮ ಶಿಕ್ಷಣ ಮೊದಲು ಮಕ್ಕಳ ಪಸ್ಟ್‌ಕ್ಲಾಸ್‌ನಲ್ಲಿ ಪಾಸಾಗಿದ್ದಾಗ ಹೆಮ್ಮೆಯಿಂದ ಕೆಲವು ಸ್ನೇಹಿತರೊಂದಿಗೆ ತಮ್ಮ ಮಕ್ಕಳನ್ನು ಅವರಿಗೆ ಪರಿಚಯಿಸಿ ನನ್ನ ಮಗಳು ಪಸ್ಟ್‌ಕ್ಲಾಸ್‌ನಲ್ಲಿ ಪಾಸಾಗಿದ್ದನ್ನು ಸಂತೋಷದಿಂದ ಹೇಳಿಕೊಳ್ಳುತ್ತಿದ್ದರು. ಆದರೆ ಇಂದು ಪಸ್ಟ್‌ಕ್ಲಾಸ್‌ನಲ್ಲಿ ಪಾಸಾಗಿದ್ದರು ತಮ್ಮ ಮನೆಪಕ್ಕದವರು ಅಥವಾ ಸಂಬಂಧಿಕರ ಮುಂದೆ ಮಕ್ಕಳು ತೆಗೆದು ಮಾರ್ಕ್‌ಗಳನ್ನು ಹೇಳಿ ನನ್ನ ಮಗ ಇನ್ನೂ ಜಾಸ್ತಿ ಮಾರ್ಕ್ಸ್ ತೆಗೆಯಬೇಕಿತ್ತು ಎಂದು ಮಕ್ಕಳ ಮೇಲೆ ಒತ್ತಡವನ್ನು ಹಾಕಿ ಅವರಿಗೆ ಬೈಯುತ್ತಿರುವುದನ್ನು ಇಲ್ಲಿ ಚಿತ್ರಿಸಲಾಗಿದೆ. ಅಲ್ಲದೆ ಬೇರೆ ಮಕ್ಕಳನ್ನು ತಮ್ಮ ಮಕ್ಕಳ ಜೊತೆಗೆ ಹೋಲಿಸಿ ನೋಡುವುದು ಅಲ್ಲದೆ ಮಕ್ಕಳು ಕಡಿಮೆ ಅಂಕಗಳನ್ನು ಗಳಿಸಿದರೆ ತಮಗೆ ನಾಚಿಕೆ ಆಗುವಂತಹ ವಿಷಯವಾಗಿ ಬಿಟ್ಟಿದೆ ಇಂದಿನ ದಿನದಲ್ಲಿ ನಮ್ಮ ಶಿಕ್ಷಣದ ಮಟ್ಟ ಸ್ಥಿತಿ-ಗತಿಯ ಬಗ್ಗೆ ಈ ಚಿತ್ರದಲ್ಲಿ ತೋರಿಸಲಾಗಿದೆ.



೨. ಈ ಚಿತ್ರದಲ್ಲಿ ಇವತ್ತಿನ ವಿದ್ಯುತ್ತಿನ ಪರಿಸ್ಥಿತಿಯ ಚಿತ್ರಣವಿದೆ. ಈ ಸಮಸ್ಯೆ ನಮ್ಮ ರಾಜ್ಯದ ಎಲ್ಲ ವರ್ಗದ ಜನರನ್ನು ಕಾಡುತ್ತಿರುವ ಸಮಸ್ಯೆಯಾಗಿದೆ. ಈ ಚಿತ್ರದಲ್ಲಿ ಪೇಪರ್ ಮತ್ತು ವಾರ್ತೆಗಳನ್ನು ನೋಡಿದರು ವಿದ್ಯುತ್‌ತ್ತಿನ ಸಮಸ್ಯೆಯನ್ನು ಎಷ್ಟರ ಮಟ್ಟಿಗೆ ಇದೇ ಇವತ್ತಿನ ದಿನಗಳಲ್ಲಿ ನಮ್ಮ ಅರ್ಧ ಕೆಲಸಗಳನ್ನು ಈ ವಿದ್ಯುತ್ತಿನ ಮೇಲೆ ಅವಲಂಬಿತವಾಗಿವೆ ಎಂದರೆ ತಪ್ಪಾಗಲಾರದು. ಅದರಿಂದ ವಿದ್ಯುತ್ತಿನ ಬೇಡಿಕೆ ಅತಿಹೆಚ್ಚಾಗಿ ನಮ್ಮ ರಾಜ್ಯದ ಜನತೆ ಕಾಡುತ್ತಿವೆ. ಅದರಿಂದ ಇದನ್ನು ಸ್ವಲ್ಪದಿನ ಲೋಡ್‌ಶೆಡ್ಡಿಂಗ್ ಸ್ಥಗಿತ ಎಂಬುದನ್ನು ಹೇಳುತ್ತಾರೆ. ಸ್ವಲ್ಪದಿನಗಳು ಕಳೆದನಂತರ ರಾಜ್ಯ ವಿದ್ಯುತ್ ಕೊರತೆಯಿಂದಾಗಿ ಲೋಡ್‌ಶೆಡ್ಡಿಂಗ್ ಮುಂದುವರಿದಿದೆಂದು ಹೇಳಲಾಗುತ್ತದೆ.

೩. ಈ ಚಿತ್ರದಲ್ಲಿ ನಮ್ಮ ಕನ್ನಡ ಮಾಧ್ಯಮವನ್ನು ಶಾಲೆಗಳನ್ನು ಬಿಟ್ಟು ಇಂಗ್ಲೀಷ್ ಶಿಕ್ಷಣವನ್ನು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಸೇರಿಕೊಳ್ಳುತ್ತಿದ್ದಾರೆ. ಅಲ್ಲದೆ ನಮ್ಮ ಶಾಲಾ ಶಿಕ್ಷಕರಿಗೂ ಅಂದಿನ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೆಲವರು ಕೆಲವು ವಿಷಯದ ಬಗ್ಗೆ ಯಾವುದೇ ರೀತಿಯ ಮಾಹಿತಿಯು ಸಹ ಗೊತ್ತಿರುವುದಿಲ್ಲ ಎನ್ನುವುದನ್ನು ಈ ಚಿತ್ರದಲ್ಲಿ ಗಮನಿಸಬಹುದಾಗಿದೆ. ಅಲ್ಲದೆ ನಮ್ಮ ಶಿಕ್ಷಣಕ್ಕೆ ಹೆಚ್ಚಿನ ರೀತಿಯಲ್ಲಿ

ಗುಣಮಟ್ಟವನ್ನು ಕಾಪಾಡಿಕೊಳ್ಳುವ ಸಲುವಾಗಿ ಸರ್ಕಾರಿ ಶಾಲೆಗಳಿಗೆ ಇಂಗ್ಲಿಷನ್ನು ಕಡ್ಡಾಯಗೊಳಿಸುವ ಸಾಹಸವನ್ನು ಇಲ್ಲಿ ಚಿತ್ರಿಸಲಾಗಿದೆ. ಆದರೆ ನಮ್ಮ ಸರಕಾರಿ ಶಾಲೆ ಶಿಕ್ಷಕರಿಗೆ ಶಿಕ್ಷಣದ ಗುಣಮಟ್ಟವನ್ನು ಕಾಪಾಡಿಕೊಳ್ಳುವಷ್ಟು ಮೂಲಭೂತವಾದ ಶಿಕ್ಷಣದ ಬಗ್ಗೆ ಅವರಿಗೆ ಮಾಹಿತಿ ಇರುವುದಿಲ್ಲ ಎಂಬುದನ್ನು ಈ ಚಿತ್ರದಲ್ಲಿ ಗುರುತಿಸಬಹುದಾಗಿದೆ.

೪. ಈ ಚಿತ್ರದಲ್ಲಿ ಇವತ್ತಿನ ದಿನಮಾನಗಳಲ್ಲಿ ತರಕಾರಿಯ ಬೆಲೆ ಗಗನ ಕುಸುಮವಾಗಿದೆ. ಸಾಮಾನ್ಯ ಜನರಿಗೆ ಕೈಗೆಟುಕದ ರೀತಿಯಲ್ಲಿ ಆಗಿ ಹೋಗಿದೆ ಎನ್ನುವುದು ಈ ಚಿತ್ರದಲ್ಲಿದೆ. ಕಳ್ಳರು ಚಿನ್ನ ಹಣವನ್ನು ಬೆಲೆಬಾಳುವ ವಸ್ತುಗಳನ್ನು ಮಾತ್ರ ಕದಿಯುತ್ತಿದ್ದರು. ಆದರೆ ಇವತ್ತಿನ ದಿನ ತನ್ನ ಮನೆಯಲ್ಲೂ ತರಕಾರಿ, ಸಾಮಾನುಗಳನ್ನು ಕೊಳ್ಳುವುದು ಸಹ ಆಗುತ್ತಿಲ್ಲ. ಆದ್ದರಿಂದ ಕದಿಯುವ ಕಳ್ಳನಿಗೆ ತನ್ನ ಹೆಂಡತಿ ಬೆಲೆಬಾಳುವ ವಸ್ತುಗಳನ್ನು ಬಿಟ್ಟು ತರಕಾರಿಯನ್ನು ತರುವಂತೆ ಹೇಳಿರುವುದನ್ನು ಇಲ್ಲಿ ಚಿತ್ರಿಸಲಾಗಿದೆ ಒಟ್ಟಾರೆಯಾಗಿ ಇವತ್ತಿನ ಸಾಮಾನುಗಳ ಬೆಲೆ ಏರಿರುವುದರಿಂದ ಸಾಮಾನ್ಯ ಜನರು ಬದುಕುವುದು ಕಷ್ಟಕರವಾಗಿದೆ.

೫. ಈ ಚಿತ್ರದಲ್ಲಿ ನಮ್ಮ ಮೆಟ್ರೊ ಸಿಟಿ ಬೆಂಗಳೂರಿನಲ್ಲಿ ನಮ್ಮ ಭಾಷೇ ಬರವಣಿಗೆಯ ಬಗ್ಗೆ ಎಷ್ಟರ ಮಟ್ಟಿಗೆ ಒಲವಿದೆಂಬುದನ್ನು ತೋರಿಸಲಾಗಿದೆ. ಮೆಟ್ರೋ ಸಿಟಿ ಬೆಂಗಳೂರು ಎಲ್ಲಾ ರೀತಿಯ ವ್ಯವಸ್ಥೆಗಳಲ್ಲಿ ತುಂಬು ಬೆಳೆದು ನಿಂತಿದೆ. ಆದರೆ ಇಲ್ಲಿನ ಜೀವನ ಎಷ್ಟು ವೇಗದಲ್ಲಿ ಓಡುತ್ತಿದೆ ಎಂಬುದು ಗೊತ್ತಾಗುತ್ತದೆ. ಅಲ್ಲಿ ಬೆಂಗಳೂರು ನಗರದಲ್ಲಿ ಎಲ್ಲಾ ರೀತಿಯ ಭಾಷೆಯ ಜನರು ಬೇರೆ ಬೇರೆ ಕಡೆಯಿಂದ ಉದ್ಯೋಗವನ್ನು ಹುಡುಕುತ್ತಾ ಒಂದು ಇಲ್ಲಿಯೆ ನೆಲೆನಿಂತಿದ್ದಾರೆ. ಇಂತಹ ಸಂದರ್ಭದಲ್ಲಿ ನಮ್ಮ ಕನ್ನಡ ಸಾಹಿತ್ಯದಂತಹ ಸಮ್ಮೇಳಗಳನ್ನು ಇಲ್ಲಿ ಏರ್ಪಡಿಸಿದಾಗ ಈ ಸಮ್ಮೇಳನಕ್ಕೆ ಬರುವಂತಹ ಜನರು ತಮ್ಮ ಕನ್ನಡ ಭಾಷೆ ಯಾವುದೇ ರೀತಿಯ ಮಾಹಿತಿಗಳನ್ನು ಕೇಳಿದರೆ ಬೇಗ ಸಿಗುವುದಿಲ್ಲ. ಅಂತಹದರಲ್ಲಿ ಕನ್ನಡ ಭಾಷೆಯನ್ನು ಬೆಳೆಸಿ ಉಳಿಸುವುದು ಈ ಸ್ಥಳದಲ್ಲಿ ಸಾಧ್ಯವಾಗದ ವಿಷಯವಾಗಿದೆ.

೬. ಈ ಚಿತ್ರದಲ್ಲಿ ಇವತ್ತಿನ ದಿನ ಹೆಣ್ಣು-ಗಂಡು ಮಗುವೆಂಬ ಬೇದವಿಲ್ಲದೆ ಅವರಿಗೆ ಸಮಾನ ರೀತಿಯಲ್ಲಿ ಶಿಕ್ಷಣವನ್ನು ಕೊಡಬೇಕಾಗಿದೆ. ಶಿಕ್ಷಣದಲ್ಲಿಯೇ ಕೆಲವು ರೀತಿಯ ಸೌಲಭ್ಯಗಳನ್ನು ಸಮಾನಾಗಿ ಇವರಿಗೆ ಕೊಡಬೇಕಾಗಿದೆ. ಆದರ ಹೆಣ್ಣಿಗೆ ಹುಟ್ಟಿದಾನಿಂದಲೂ ಸಾಯುವವರೆಗೆ ಒಂದಲ್ಲ ಒಂದು ರೀತಿಯ ಜವಾಬ್ದಾರಿಗಳು ಇರುತ್ತವೆ. ನಮ್ಮ ಸಮಾಜದ ಬದುಕಿನ ಜೀವನದಲ್ಲಿರುವುದನ್ನು ಚಿತ್ರಿಸಲಾಗಿದೆ ಎನ್ನುವುದು ಈ ಚಿತ್ರದಿಂದ ತಿಳಿದುಕೊಳ್ಳಬಹುದಾಗಿದೆ. ಅಲ್ಲದೆ ಶಿಕ್ಷಣವನ್ನು ಕಲಿಯಬೇಕಾದರೆ ಹೆಣ್ಣು ಮಗು ತನ್ನ ಪುಸ್ತಕದ ಚೀಲದ ಬಾರವನ್ನು ತನ್ನ ಬೆನ್ನ ಮೇಲೆ ಹೇರಿಕೊಳ್ಳಬೇಕು ಮದುವೆಯಾದ ನಂತರ ಮಗುವಿನ ಭಾರ ಹೊತ್ತು ಅದನ್ನು ಸಾಕಿ ಬೆಳೆಸುವ ಸಂಪೂರ್ಣ ಜವಾಬ್ದಾರಿಯನ್ನು ತಾಯಿಗೆ ಇರುತ್ತದೆ. ಅಲ್ಲದೆ ಹೆಣ್ಣಿನ ಒಟ್ಟಾರೆಯ ಜವಾಬ್ದಾರಿಯನ್ನು ನಾವು ಈ ಚಿತ್ರದಿಂದ ನೋಡಿ ತಿಳಿದುಕೊಳ್ಳಬಹುದಾಗಿದೆ.

೭. ಈ ಚಿತ್ರದಲ್ಲಿ ನಮ್ಮ ಕರ್ನಾಟಕದಲ್ಲಿ ಬಿಸಿಯೂಟವನ್ನು ಜಾರಿಮಾಡಿದ ಸರ್ಕಾರವು ಅದರ ಗುಣಮಟ್ಟವನ್ನು ಮಾತ್ರ ಕಾಪಾಡಿಕೊಳ್ಳುವ ಜವಾಬ್ದಾರಿಯಿಂದ ಹಿಂದೆ ಸರಿದಿದೆ. ಸರಕಾರಿ ಶಾಲೆಗಳಲ್ಲಿ ಅಡುಗೆ

ಮಾಡುವಂತ ಪದಾರ್ಥಗಳು ಪಾತ್ರೆಗಳು, ಅಡುಗೆ ಮನೆ ಒಟ್ಟಾರೆಯಾಗಿ ನಮ್ಮ ಮಕ್ಕಳನ್ನು ಅನಾರೋಗ್ಯ ಸ್ಥಿತಿಯತ ಕೊಂಡೊಯ್ಯುವುದು ಸತ್ಯವಾದ ಸಂಗತಿಯಾಗಿದೆ ಎಂಬುದನ್ನು ಈ ಚಿತ್ರದಲ್ಲಿ ಚಿತ್ರಿಸಲಾಗಿದೆ. ಈ ಊಟವನ್ನು ತಿಂದ ನಾಯಿಯು ಸಹ ಕೆಮ್ಮಿ ಕೆಮ್ಮಿ ವಾಂತಿಯನ್ನು ಮಾಡುತ್ತಿರುವುದನ್ನು ಈ ಚಿತ್ರದಲ್ಲಿದೆ. ಈ ಚಿತ್ರದಿಂದ ನಮ್ಮ ಪ್ರಾಥಮಿಕ ಶಿಕ್ಷಣದಲ್ಲಿ ನೀಡುವಂತಹ ಬಿಸಿಯೂಟದ ಸುಚಿತ್ವದ ಬಗ್ಗೆ ತೋರಿಸಿ ಚಿತ್ರಿಸಲಾಗಿದೆ.

೮. ಈ ನಮ್ಮ ಹಳ್ಳಿಗಾಡಿನ ಜನರು ಎಷ್ಟು ಮುಗ್ಧರೆಂಬುದನ್ನು ಇಲ್ಲಿನೋಡಬಹುದಾಗಿದೆ. ತನ್ನ ಮಕ್ಕಳು ಸಮವಸ್ತ್ರಗಳನ್ನು ಧರಿಸಿ ಪುಸ್ತಕದ ಬ್ಯಾಗ್‌ಗಳನ್ನು ತಮ್ಮ ಬೆನ್ನಮೇಲೆ ಹೇರಿಕೊಂಡು ಹೋಗುವುದನ್ನು ನೋಡಲು ಎಷ್ಟು ಸಂತೋಷಪಟ್ಟುಕೊಳ್ಳುತ್ತಾರೆಂಬುದನ್ನು ಇಲ್ಲಿ ತೋರಿಸಲಾಗಿದೆ. ಅಲ್ಲಿ ತಮ್ಮ ಮಕ್ಕಳು ತಾವು ಕಲಿಸುವ ಶಾಲೆಯಲ್ಲಿ ತಮ್ಮ ಮಕ್ಕಳಿಗೆ ಏನನ್ನು ಕಲಿಸುತ್ತಾರೆಂಬುದು ಸಹ ಈ ಮುಗ್ದ ಜನರಿಗೆ ಗೊತ್ತಾಗುವುದಿಲ್ಲವೆಂಬುದನ್ನು ಈ ಚಿತ್ರದಲ್ಲಿ ಚಿತ್ರಿಸಿ ತೋರಿಸಲಾಗಿದೆ. ಅಲ್ಲದೆ ಏನೋ ಕೆಲವು ಪದಗಳನ್ನು ಇಂಗ್ಲೀಷ್‌ನಲ್ಲಿ ಹೇಳಿದರೆ ಅವುಗಳ ಅರ್ಥಗಳು ಸಹ ಗೊತ್ತಿರುವುದಿಲ್ಲ. ಅವರು ಹೇಳಿದ್ದೇಲ್ಲವನ್ನು ಸರಿಯಾಗಿದೆಂಬುದರ ಮುಗ್ದತೆಯನ್ನು ಇಲ್ಲಿ ಚಿತ್ರಿಸಿ ತೋರಿಸಲಾಗಿದೆ.

೯. ಈ ಚಿತ್ರದಲ್ಲಿ ನಾವು ದಿನಿತ್ಯ ಉಪಯೋಗಿಸುವ ಹಾಲಿನ ಗುಣದ ಬಗ್ಗೆಯು ಹೇಳುವಂತಹ ಸಂದರ್ಭದ ಚಿತ್ರ ಇದಾಗಿದೆ. ಇವತ್ತಿನ ದಿನಗಳಲ್ಲಿ ಹಾಲಿನಲ್ಲಿ ಹಾಲಿನ ಅಂಶಕ್ಕಿಂತ ನೀರಿನ ಅಂಶವೇ ಜಾಸ್ತಿಯಾಗಿದೆ. ಆದರೂ ಇವತ್ತಿನ ದಿನಗಳಲ್ಲಿ ಕುಡಿಯುವ ನೀರು ಸಹ ಕೆಲವು ಭಾಗಗಳಲ್ಲಿ ದೊರೆಯುತ್ತಿಲ್ಲ. ನೀರನ್ನು ದುಡ್ಡುಕೊಟ್ಟು ತೆಗೆದುಕೊಳ್ಳುತ್ತಿದ್ದಾರೆ. ಆ ಸಂದರ್ಭವನ್ನು ಹೇಳಲು ನೀರಿನ ದುಬಾರಿಯನ್ನು ಹಾಲಿಗಿಂತಲೂ ಜಾಸ್ತಿ ಇರುವುದನ್ನು ಇಲ್ಲಿ ಗಮನಿಸಲಾಗಿದೆ.

೧೦. ಈ ಚಿತ್ರದಲ್ಲಿ ಇವತ್ತಿನ ದಿನಗಳಲ್ಲಿ ಹೆಣ್ಣುಮಕ್ಕಳಿಗೆ ಮೀಸಲಾತಿ ಬಂದ ಮೇಲೆ ಹೆಚ್ಚಾಗಿ ಹೆಣ್ಣುಮಕ್ಕಳು ಹೊರಗಡೆಗೆ ದುಡಿಯಲು ಹೋಗುತ್ತಾರೆ. ಕೆಲಸವಿಲ್ಲ ಗಂಡಸರು ಮನೆಯ ಕೆಲಸವನ್ನು ಮಾಡಿಕೊಂಡು ಮಕ್ಕಳನ್ನು ನೋಡಿಕೊಳ್ಳಬೇಕಾಗಿದೆ. ಅಂತಹ ಸನ್ನಿವೇಶಗಳು ನಮ್ಮ ಸಮಾಜದಲ್ಲಿ ಅತಿ ಹೆಚ್ಚಾಗಿ ನೋಡಲು ಸಿಗುತ್ತವೆ. ಈ ಚಿತ್ರದಲ್ಲಿ ತನ್ನ ಹೆಂಡತಿಗೆ ಅಡುಗೆ ಮಾಡಿಕೊಡುವ ಗಂಡಂದಿರಿಗೆ ಅವರು ಮಾಡಿದ ಅಡುಗೆಯಲ್ಲಿ ಸ್ವಲ್ಪ ವ್ಯತ್ಯಾಸವಾದರು ಮತ್ತೆ ಅದನ್ನು ಸರಿಪಡಿಸಿಕೊಂಡು ಮತ್ತೆ ತಮ್ಮ ಕೆಲಸಕ್ಕೆ ಪುನಃ ಹಾಜರಾಗಬೇಕೆಂಬುವುದು ಇಲ್ಲಿ ತೋರಿಸಲಾಗಿದೆ. ಅಲ್ಲದೆ ಇವತ್ತಿನ ಕೆಲವು ಗಂಡಂದಿರ ಸ್ಥಿತಿಯನ್ನು ಸಹ ಕಾಣಬಹುದಾಗಿದೆ.

೧೧. ಈ ಚಿತ್ರದಲ್ಲಿ ನಮ್ಮ ಸಮಾಜಕ್ಕೂ ದೇಶಕ್ಕೂ ದೊಡ್ಡ ಪಿಡುಗಾಗಿ ಕಾಡುತ್ತಿರುವುದು ಮದ್ಯಪಾನವಾಗಿದೆ. ಮದ್ಯಪಾನ ಸೇವನೆಯಿಂದ ದೇಹಕ್ಕೂ ಹಾಗೂ ಸಂಸಾರಕ್ಕೂ ಎಷ್ಟರ ಮಟ್ಟಿಗೆ ಸಂಬಂಧವಿದೆ, ಎಂಬುದನ್ನು ಇಲ್ಲಿ ಚಿತ್ರಿಸಲಾಗಿದೆ. ಅಲ್ಲದೆ ಈ ಮದ್ಯಪಾನದಿಂದ ಎಷ್ಟೋ ಸಂಸಾರಗಳು ಬೀದಿಗೆ ಬಂದು ನಿಂತಿವೆ. ಆದರೂ ಈ ಮದ್ಯಪಾನವನ್ನು ಸರಕಾರವೇ ಸಂಪೂರ್ಣವಾಗಿ ನಿಷೇಧಿಸಲು ಆಗುತ್ತಿಲ್ಲ. ಏಕೆಂದರೆ ಈ

ಮದ್ಯಪಾನದಿಂದ ಸರಕಾರಕ್ಕೆ ಎಷ್ಟು ಆದಾಯವಿದೆ ಅದಕ್ಕೆಂಬುದನ್ನು ಈ ಚಿತ್ರದಲ್ಲಿ ನಾವು ನೋಡಬಹುದಾಗಿದೆ. ಅಲ್ಲದೆ ಸರಕಾರಕ್ಕೆ ಎಷ್ಟರಮಟ್ಟಿಗೆ ಲಾಭವಿದೆಂಬುದನ್ನು ಸಹ ಇಲ್ಲಿ ತಿಳಿದುಕೊಳ್ಳಬಹುದಾಗಿದೆ.

೧೨. ಈ ಚಿತ್ರದಲ್ಲಿ ನಮ್ಮ ದೇಶದಲ್ಲಿ ಗಂಡನಿಂದ ಶೋಷಣೆಗೆ ಒಳಗಾಗುವುದು ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರೆ. ಆದರೆ ಕಾಲ ಬದಲಾಗಿದೆ. ಅತ್ತೆಗೆ ಒಂದು ಕಾಲ ಸೊಸೆಗೆ ಒಂದು ಕಾಲವೆನ್ನುವ ರೀತಿಯಲ್ಲಿ ಈಗ ಎಲ್ಲಾ ಉಲ್ಟಾವಾಗಿದೆ. ಇವತ್ತಿನ ದಿನಗಳಲ್ಲಿ ಹೆಂಡತಿಯರೆ ಗಂಡಂದಿರನ್ನು ಒಡೆದು ಹಾಕುತ್ತಿದ್ದಾರೆ. ಅಲ್ಲದೆ ಎಲ್ಲಾ ಕ್ಷೇತ್ರದಲ್ಲೂ ಹೆಣ್ಣುಮಕ್ಕಳೆ ಮೇಲ್ಗೈಯಾಗಿರುವುದನ್ನು ನಾವು ಪ್ರಸ್ತುತ ದಿನಗಳಲ್ಲಿ ನಾವು ಗಮನಿಸಬಹುದಾಗಿದೆ.

**ಹಾಸ್ಯಪ್ರಧಾನ ವ್ಯಂಗ್ಯಚಿತ್ರಗಳು**

ತಂತ್ರಜ್ಞಾನದ ಬೆಳವಣಿಗೆಯೊಂದಿಗೆ ಬಣ್ಣದ ಮುದ್ರಣ ಪತ್ರಿಕೋದ್ಯಮಕ್ಕೆ ಕಾಲಿಟ್ಟಂತೆ ವ್ಯಂಗ್ಯಚಿತ್ರಗಳು ಮತ್ತಷ್ಟು ಮೈದುಂಬಿಕೊಂಡು ರಂಗೋಳಿಸತೊಡಗಿದವು 'ಹ್ಯೂಮರಸ್ ವ್ಯಂಗ್ಯಚಿತ್ರ' ಪ್ರಭೇದ ಮುಖ್ಯವಾಗಿ ರೂಪುಗೊಂಡಿದ್ದೇ ಆಗ. ನಗೆ ಎನ್ನುವುದು ಎಲ್ಲ ವ್ಯಂಗ್ಯಚಿತ್ರಗಳ ಆತ್ಮ ಎನ್ನುವುದು ನಿಜವಾದರೂ, ನಗೆಯೇ ಮುಖ್ಯವಾಗಿ ರೂಪುಗೊಳ್ಳುವ ವ್ಯಂಗ್ಯಚಿತ್ರಗಳನ್ನೇ ಒಂದು ಪ್ರಭೇದವಾಗಿ ಅನೇಕ ಜನ ತಜ್ಞರು ಗುರುತಿಸಿದ್ದಾರೆ.

ವ್ಯಂಗ್ಯಚಿತ್ರಗಳು ನಮ್ಮ ಸುತ್ತಲಿನ ವ್ಯಕ್ತಿ ಆಧಾರಿತ ಘಟನೆಗಳು, ಸನ್ನಿವೇಶಗಳು ಪ್ರಸ್ತುತ ಜನ ಜೀವನದ ದಿನ ನಿತ್ಯದ ಬದುಕಿನ ಬಡೆದಾಟಗಳನ್ನು ಗಮನಿಸಿಕೊಂಡು ಅವುಗಳ ಆಧಾರದ ಮೇಲೆ ನಮ್ಮ ವ್ಯಂಗ್ಯಚಿತ್ರ ಕಲಾವಿದರ, ಕಲಾಗಾರ್ತಿಯರು ಬಹು ಜಾಣ್ಮೆ ಹಾಗೂ ತಮ್ಮ ಅದ್ಭುತ ಕಲ್ಪನಾ ಶಕ್ತಿಯಿಂದ ಜನರನ್ನು ನಕ್ಕು ನಗಿಸುವಲ್ಲಿ ತಮ್ಮನ್ನು ತಮ್ಮ ಪ್ರತಿಭೆ ತೋರಿಸಲಾಗಿದೆ.

೧೮೯೨ ರಲ್ಲಿ ಮೊದಲ ಬಾರಿಗೆ ಬಣ್ಣದಲ್ಲಿ ಮೂಡಿಬಂದ ವ್ಯಂಗ್ಯಚಿತ್ರ 'ನ್ಯೂಯಾರ್ಕ ವರ್ಲ್ಡ್'ನಲ್ಲಿ ಪ್ರಕಟಗೊಂಡಿತು. ಅಲ್ಲವೆ ಅನೇಕ ಜನ ವ್ಯಂಗ್ಯಚಿತ್ರಕಾರರ ರಚನೆಗಳು ನಿರಂತರವಾಗಿ ಪತ್ರಿಕೆಗಳಲ್ಲಿ ಕಾಣಿಸಿಕೊಳ್ಳತೊಡಗಿದವು. ಈ ಎಲ್ಲ ವ್ಯಂಗ್ಯಚಿತ್ರಕಾರರು ಹ್ಯೂಮರ್ ಚಿತ್ರಗಳ ಬೆಳವಣಿಗೆಗೆ ತಮ್ಮದೇ ಆದ ಕಾಣಿಕೆ ಸಲ್ಲಿಸಿದ್ದಾರೆ.

ಹಾಸ್ಯ ಪ್ರಧಾನ ವ್ಯಂಗ್ಯಚಿತ್ರಗಳು ಇರುವಂತಹ ಸಾಮಾಜಿಕ ವ್ಯಂಗ್ಯಚಿತ್ರಗಳ ಜೊತೆಯಲ್ಲಿ ಈ ಚಿತ್ರಗಳಲ್ಲಿ ವಿರುದ್ಧವಾದ ರೀತಿಯಲ್ಲಿ ಊಹಾತ್ಮಕವಾಗಿ ಕಾಲ್ಪನಿಕವಾಗಿ ಈ ಹಾಸ್ಯ ಪ್ರಧಾನ ವ್ಯಂಗ್ಯಚಿತ್ರ ತಯಾರಾಗಿರುತ್ತವೆ. ಇಂತಹ ವ್ಯಂಗ್ಯಚಿತ್ರಗಳು ವೀಕ್ಷಕ ಓದುಗರಲ್ಲಿ ಒಂದು ಮಂದಹಾಸ ವಿರುವಂತೆ ಮಾಡುತ್ತವೆ. ಈ ಹಾಸ್ಯ ಪ್ರಧಾನ ವ್ಯಂಗ್ಯಚಿತ್ರಗಳು ಮದ್ಯಮವರ್ಗವನ್ನು ಮೀರಲಾಗದ ಜೊತೆಗೆ ಮೀರಲೊಲ್ಲದ ದೈನಂದಿನ ಜನಸಾಮಾನ್ಯರ ಜೀವನದ ಕೆಲವು ಸುತ್ತಲಿನ ಘಟನೆಗಳ ಬಗ್ಗೆ ಮತ್ತು ಪ್ರಸ್ತುತವಾದ ದಿಢೀರ ಸುದ್ದಿಗಳನ್ನು ನೋಡಿ ಒಮ್ಮೆ ಕಗ್ಗಾಡಿಸಿ ನಕ್ಕು ನಲಿಯುವಂತೆ ಮಾಡುತ್ತವೆ. ಈ ಚಿತ್ರಗಳಲ್ಲಿ ಸ್ವಲ್ಪ ವ್ಯಂಗ್ಯ, ಸೊನ್ನೆ, ಸಿನಿಕತನ, ಒಂದಿಷ್ಟು 'ಒಳಶುಂಠಿಯ' ಒಗರು ಕಂಡುಬರುತ್ತವೆ. ಬಯಲು ಸೀಮೆ ಕಟ್ಟೇಪುರಾಣದ ನಗರೀಕೃತ

ದೃಶ್ಯಾತ್ಮಕ ಪರಿಕಲ್ಪನೆಯಿದು, ಭೌತಿಕವಾಗಿ ಉಂಟಾಗುವ ಸೋಲನ್ನು ಹಾಸ್ಯ ರೂಪಕದ ಮೂಲಕ ಗೆಲ್ಲುವ ಯತ್ನವೂ ಹೌದು ಇಲ್ಲಿನ ಚಿತ್ರಗಳು.

ಹಾಸ್ಯ ಪ್ರಧಾನ ಚಿತ್ರಗಳು ರಾಜಕೀಯ ವ್ಯಂಗ್ಯಚಿತ್ರಗಳಲ್ಲಿಯೂ ಸಾಮಾಜಿಕ ವ್ಯಂಗ್ಯ ಚಿತ್ರಗಳಲ್ಲಿಯೂ ಈ ಹಾಸ್ಯವನ್ನು ನೋಡಬಹುದಾಗಿದೆ. ಅಲ್ಲದೆ ಹಾಸ್ಯಕ್ಕೆ ಸೀಮಿತವಾಗಿಯೇ ಕೆಲವು ಘಟನೆ ಮತ್ತು ವಸ್ತುಗಳನ್ನು ಆಧಾರವಾಗಿಟ್ಟುಕೊಂಡು ಹಾಸ್ಯ ಪ್ರಧಾನ ರೂಪಗಳಲ್ಲಿದೆ. ಇಂತಹ ಹಾಸ್ಯ ಪ್ರಧಾನವಾಗಿ ಕೆಲವು ಚಿತ್ರಗಳನ್ನು ಚಿತ್ರಗಳ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ.

**ಹಾಸ್ಯ ಚಿತ್ರಗಳು**

೧. ಈ ಚಿತ್ರದಲ್ಲಿ ಇವತ್ತಿನ ನಮ್ಮ ದೇಶದಲ್ಲಿ ಮಳೆಯು ಕಡಿಮೆಯಾಗಿ ಬರಗಾಲವನ್ನು ಎದುರುನೋಡುತ್ತಿದೆ. ಅಂತಹ ಸಂದರ್ಭ ದೇವರ ಪೂಜೆ, ಕತ್ತೆಪೂಜೆ, ಕಟ್ಟೆಗಳಪೂಜೆ ಓಣಕೆಪೂಜೆ ಹೀಗೆ ಹತ್ತು ಹಲವು ರೀತಿಯಲ್ಲಿ ಪೂಜೆಗಳನ್ನು ಮಾಡುತ್ತಾರೆ. ಈ ರೀತಿ ಪೂಜೆ ಮಾಡುವುದರಿಂದ ಮಳೆಬರುತ್ತದೆ ಎನ್ನುವುದು ಕೇಳವರ ನಂಬಿಕೆಯಾಗಿಬಿಟ್ಟಿದೆ. ಇದನ್ನು ಕೆಲವಾರು ಜೋತಿಷ್ಯರು, ಪೂಜಾರಿಗಳು ಒಂದು ವೃತ್ತಿಯಾಗಿ ಮಾಡಿಕೊಂಡಿದ್ದಾರೆ. ಈ ಚಿತ್ರದಲ್ಲಿ ಇದೇ ರೀತಿಯಾಗಿ ಮಳೆ ಬರುವ ಮುನ್ಸೂಚನೆಯನ್ನು ಗಮನಿಸಿಕೊಂಡು ಪೂಜೆಯನ್ನು ಮಾಡುತ್ತಿರುವುದನ್ನು ನಾವು ಈ ಚಿತ್ರದಲ್ಲಿ ಗುರುತಿಸಬಹುದಾಗಿದೆ. ಅಲ್ಲದೆ ತಮ್ಮ ಪ್ರಚಾರಕ್ಕಾಗಿ ಮಾಧ್ಯಮದವರೊಂದಿಗೆ ತಾವು ಪೂಜೆ ಮಾಡಿದ್ದರಿಂದ ಮಳೆ ಬಂತು ಎಂಬುದನ್ನು ನಂಬಿಸುವುದು ಈ ಚಿತ್ರದಲ್ಲಿ ನೋಡಬಹುದಾಗಿದೆ.

೨. ಈ ಚಿತ್ರದಲ್ಲಿ ವ್ಯಕ್ತಿಗಳು ಅತೀಯಾದ ಮೋಸ ವಂಚನೆಗೊಳಗಾದ ಯಾವ ವ್ಯಕ್ತಿಯು ತನ್ನ ಜನಪ್ರಿಯತೆಯನ್ನು ಮತ್ತೆ ಪಡೆದುಕೊಳ್ಳುವುದಾಗುತ್ತಿಲ್ಲ. ಅಂತೆಯೇ ನಮ್ಮ ಮೊಬೈಲ್‌ಗಳನ್ನು ಸ್ವಿಚ್ ಆಫ್ ಆದಾಗ ಅದನ್ನು ಚಾರ್ಜ್‌ಮಾಡಿ ಮತ್ತೆ ಬಳಸಿಕೊಳ್ಳುತ್ತಿವೆಯೋ ಅದೇ ರೀತಿ ತಪ್ಪು, ಮೋಸ ಅತಿಯಾದಾಗ ತನ್ನ ಸ್ಥಾನಮಾನಗಳು ಸ್ಥಗಿತವಾಗುತ್ತವೆ. ಮತ್ತೆ ಅವುಗಳಿಂದ ಮುಕ್ತಿ ಹೊಂದಲು ಅಂದರೆ 'ಉಪ್ಪು ತಿಂದವನು ನೀರು ಕುಡಿಯಲೇ ಬೇಕು' ಎನ್ನುವ ಮಾತಿಗೆ ಈ ಚಿತ್ರದಲ್ಲಿ ಹಾಸ್ಯಾಸ್ಪದವಾಗಿ ಚಿತ್ರಿಸಲಾಗಿದೆ. ಇಲ್ಲಿ ಅತೀಯಾದ ತಪ್ಪುಮಾಡಿದವನಿಗೆ ಜೈಲಿಗೆ ಹೋಗಬೇಕು ಎನ್ನುವುದು ಹೇಳುವುದು ಈ ಚಿತ್ರದಲ್ಲಿ ರಚಿಸಲಾಗಿದೆ.

೩. ಈ ಚಿತ್ರದಲ್ಲಿ ಇವತ್ತಿನ ರಾಜಕೀಯ ವ್ಯಕ್ತಿಗಳು ಚೆನ್ನಾಗಿ ತಿಂದು ದಪ್ಪಗಿರುವುದನ್ನು ತೋರಿಸುವುದರ ಉದ್ದೇಶವಾಗಿದೆ. ಅಲ್ಲದೆ ನಮ್ಮ ರಾಜಕೀಯ ವ್ಯಕ್ತಿಗಳು ಸಾಮಾನ್ಯವಾಗಿ ಬಿಳಿಯ ಬಟ್ಟೆಗಳನ್ನು ಧರಿಸುತ್ತಾರೆ. ನಮ್ಮ ಮಕ್ಕಳಿಗೆ ನಾವು ಕೆಲವು ಕಥೆಗಳನ್ನು ಹೇಳುತ್ತೇವೆ. ಆ ಕಥೆಗಳಲ್ಲಿ ಆನೆಯೆಂದರೆ ದಪ್ಪವಾಗಿರುತ್ತದೆ. ಎನ್ನುವ ಅದರ ಆಕಾರದ ನಮ್ಮ ಮಕ್ಕಳಿಗೆ ಹೇಳಿರುತ್ತೇವೆ. ಅಂದರೆ ಗಾತ್ರದ ಬಗ್ಗೆ ಅದರ ನಡುಗೆ, ಅದರ ಗಾತ್ರ ಹೀಗೆ ಕೆಲವು ವಸ್ತುಗಳ ಬಗ್ಗೆ ಹೇಳಬೇಕಾಗಿದೆ. ಅದರದೇ ಆದ ವಿಶೇಷತೆಯನ್ನು ಹೇಳಿರುತ್ತೇವೆ. ಈ ಚಿತ್ರದಲ್ಲಿ ಕೆಲವು ರಾಜಕೀಯ ವ್ಯಕ್ತಿಗಳನ್ನು ಗುರುತಿಸಬೇಕಾಗಿದರೆ ಅವರು ಆನೆಗಳ ರೀತಿಯಲ್ಲಿ ತಮ್ಮ ಗಾತ್ರಗಳನ್ನು ಹಿಗ್ಗಿಸಿಕೊಂಡಿರುತ್ತಾರೆ ಎಂಬುದನ್ನು ಇಲ್ಲಿ ಗಮನಿಸಬಹುದು.

೪. ಈ ಚಿತ್ರದಲ್ಲಿ ಕಛೇರಿಗಳಲ್ಲಿ ಕೆಲಸ ಆಗಬೇಕಾದರೆ ನಾವು ಅವರಿಗೆ ಹಣ ಅಥವಾ ಕೆಲವು ರೀತಿಯ ವಸ್ತುಗಳನ್ನು ಕೊಡಬೇಕಾಗುತ್ತದೆ. ನಾವು ಕೊಡದೆ ಹೋದರೆ ಕಛೇಗಳಿಗೆ ಅಲೆದು-ಅಲೆದು ಸಾಕಾಗಬೇಕಾಗುತ್ತದೆ. ಒಟ್ಟಾರೆ ನಮ್ಮ ದೇಶದ ಸಂಸ್ಕೃತಿಯಲ್ಲಿ ಲಂಚವಿಲ್ಲದೆ ಯಾವ ಕೆಲಸವು ನಡಿಯುವುದಿಲ್ಲ. ಇಂದಿನ ದಿನ ನಾವು ಬಳಸುವ ವಸ್ತುಗಳಲ್ಲಿ ಕಲಬೆರಕೆಯನ್ನು ಎಷ್ಟರ ಮಟ್ಟಿಗೆ ನಡೆಯುತ್ತವೆ ಎಂಬುದನ್ನು ಈ ಚಿತ್ರದಲ್ಲಿ ನಾವು ನೋಡಬಹುದಾಗಿದೆ. ಇತ್ತೀಚಿನ ದಿನಗಳ ನಮ್ಮ ಟಿ.ವಿ.ಿನವರು ಅನೇಕ ರೀತಿಯ ಬಳಸುವಂತಹ ವಸ್ತುಗಳ ಕಲಬೆರಕೆ ಮಾಡುತ್ತಿದ್ದಂಹ ಜಾಲವನ್ನು ಪತ್ತೆಹಚ್ಚಿ ಅವುಗಳ ಗುಣಮಟ್ಟದ ಬಗ್ಗೆ ವರದಿಮಾಡಿತ್ತು. ಈ ಚಿತ್ರದಲ್ಲಿ ಕಲಬೆರಕೆಯ ಬಗೆಯನ್ನು ಕೊಟ್ಟು ತನ್ನ ಆಫೀಸಿನ ಕೆಲಸವನ್ನು ಮಾಡಿಸಿಕೊಳ್ಳುತ್ತಿರುವುದನ್ನು ಇಲ್ಲಿ ನೋಡಬಹುದಾಗಿ ಅದರ ಪರಿಣಾಮವಾಗಿ ಮೂಡಿಬಂದ ಹಾಸ್ಯಾಸ್ಪದ ಚಿತ್ರವಿದಾಗಿದೆ.

೫. ಈ ಚಿತ್ರದಲ್ಲಿ ಪೋಸ್ಟ್‌ಮಾಡುವುದನ್ನು ಇವತ್ತಿನ ದಿನಮಾನಗಳ ಅದನ್ನು ಮರೆತೆಬಿಟ್ಟಿದ್ದಾರೆ. ಏನಿದ್ದರೂ ಇಮೇಲ್‌ಗಳು, ಮೊಬೈಲ್‌ಗಳ ಮತ್ತು ಫ್ಯಾಕ್ಸ್‌ಗಳ ಮುಖಾಂತರ ತಮ್ಮ ಸಂದೇಶಗಳನ್ನು ಕಳಿಸುತ್ತಿದ್ದಾರೆ. ಆದರೆ ಪೋಸ್ಟ್ ಬಾಕ್ಸ್‌ಗಳಲ್ಲಿ ಅತಿ ಕಡಿಮೆ ರೀತಿಯ ಪತ್ರಗಳನ್ನು ಕಳುಹಿಸುವುದನ್ನು ಇಲ್ಲಿ ಚಿತ್ರಿಸಿದ್ದಾರೆ. ಆದ್ದರಿಂದ ಪೋಸ್ಟ್ ಬಾಕ್ಸ್‌ಗಳು ಒಂದು ರೀತಿಯ ನಿರುಪಯುಕ್ತ ವಸ್ತುಗಳಾಗಿ ಕಸದ ರೀತಿಯ ಡಬ್ಬಿಗಳಾಗಿಹೋಗಿವೆ. ಈ ರೀತಿ ಕಸದ ಡಬ್ಬಿಗಳಲ್ಲಿ ಹುಳ ಹುಪ್ಪಟೆಗಳು, ಹಾವುಗಳು ಸೇರಿಕೊಂಡಿವೆ ಎನ್ನುವುದನ್ನು ಹಾಸ್ಯಾಸ್ಪದವಾಗಿ ಈ ಚಿತ್ರದಲ್ಲಿ ರಚಿಸಲಾಗಿದೆ. ಅಲ್ಲದೆ ನಾವುಗಳು ಸಹ ಪೋಸ್ಟ್‌ಡಬ್ಬಿಗೆ ಪತ್ರಗಳನ್ನು ಹಾಕಬೇಕಾದರೆ ಯೋಚನೆ ಮಾಡಬೇಕಾಗಿದೆ.

೬. ಈ ಚಿತ್ರದಲ್ಲಿ ಬಿರುಗಾಳಿ, ಮಳೆ ಬಂದಾಗ ನಮ್ಮ ರಕ್ಷಣೆಗಾಗಿ ಛತ್ರಿಗಳನ್ನು ಬಳಸುತ್ತೇವೆ. ಆದರೆ ಕೆಲವು ಛತ್ರಿಗಳ ಗುಣಮಟ್ಟಗಳು ಹೇಗಿರುತ್ತವೆ ಎಂಬುದನ್ನು ಸಹ ನಾವು ಈ ಚಿತ್ರದಿಂದ ಅರ್ಥಮಾಡಿಕೊಳ್ಳಬಹುದಾಗಿದೆ. ಈ ಚಿತ್ರದಲ್ಲಿ ರಕ್ಷಣೆಗೆಂದು ಬಳಸಿದ ಛತ್ರಿಯು ಮಳೆಯ ನೀರಿನ ಭಾರಕ್ಕೆ ಉಲ್ಟವಾಗಿದೆ. ಈ ಚಿತ್ರದಲ್ಲಿ ಒಟ್ಟಾರೆಯ ಚಿತ್ರಿಸಿದ ಸನ್ನಿವೇಶವನ್ನು ನೋಡಿದಾಗ ಎಂತಹ ನೋಡುಗರಿಗೂ ಹಾಸ್ಯವನ್ನು ಸೃಷ್ಟಿಸುತ್ತವೆ.

೭. ಈ ಚಿತ್ರದಲ್ಲಿ ಮಲೆನಾಡಿ ಕಡೆ ಬಸ್ಸುಗಳ ವ್ಯವಸ್ಥೆ ಮತ್ತು ಅಲ್ಲಿ ಅತಿಯಾದ ಮಳೆಯ ಪರಿಣಾಮವನ್ನು ಗಮನಿಸಬಹುದಾಗಿದೆ. ಮನೆಗಳು ಸೋರಿದರೆ ಬೆಚ್ಚಗಿರಲು ಸೋಗೆ ಮತ್ತು ಹುಲ್ಲನ್ನು ಹೊದಿಸಿರುವುದನ್ನು ನಾವು ನೋಡಿರುತ್ತೇವೆ. ಆದರೆ ಬಸ್ಸುಗಳಲ್ಲಿ ಚಳಿಯಿಂದ ರಕ್ಷಿಸಿಕೊಳ್ಳಲು ಮಲೆನಾಡಿನ ಬಸ್ಸುಗಳಿಗೆ ಸೋಗೆ ಸೊಪ್ಪನ್ನು ಹೊದಿಸಿರುವುದನ್ನು ಹಾಸ್ಯವಾಗಿ ಇಲ್ಲಿ ಚಿತ್ರಸಿರುವುದನ್ನು ನೋಡಬಹುದು.

೮. ಈ ಚಿತ್ರದಲ್ಲಿ ಇವತ್ತಿನ ದಿನಮನಗಳಲ್ಲಿ ಸರಣಿಯಾಗಿ ಬರುವ ಸೀರಿಯಲ್‌ಗಳನ್ನು ನೋಡುವುದೆ ಒಂದು ಹಬ್ಬವಾಗಿದೆ ಮಹಿಳೆಯರಿಗೆ. ಈ ಸೀರಿಯಲ್ ಮುಗಿಯುವವರಿಗೂ ಯಾವ ರೀತಿಯ ಕೆಲಸ ಕಾರ್ಯಗಳನ್ನು ಮಾಡುವುದಿಲ್ಲ. ಅಲ್ಲದೆ ಪ್ರಸ್ತುತವಾಗಿ ಬಿತ್ತರವಾಗುತ್ತಿರುವ ಸೀರಿಯಲ್‌ಗಳು ಸಾಂಸಾರಿಕ ಧಾರಾವಾಹಿಗಳು ಹೆಚ್ಚು. ಆದ್ದರಿಂದ ಸಂಜೆಯ ಧಾರಾವಾಹಿಗಳನ್ನು ನೋಡುವಾಗ ಟಿ.ವಿ.ಗಳ ಮುಂದೆ

ಬಕೆಟ್‌ಗಳನ್ನು ಇಟ್ಟರೆ ಧಾರಾವಾಹಿಗಳಲ್ಲಿ ನಟನೆ ಮಾಡುವ ಕಲಾವಿದರು ಅಳುವುದನ್ನು ಅವರ ಕಣ್ಣೀರನ್ನು ಬಕೆಟ್‌ಗಳಲ್ಲಿ ಶೇಖರಿಸುವಷ್ಟು ಎಂಬುದನ್ನು ಹಾಸ್ಯಾಸ್ಪದವಾಗಿ ಮೂಡಿ ಬಂದಿದೆ.

೯. ಈ ಚಿತ್ರದಲ್ಲಿ ಇಂದಿನ ಕಾಲೇಜು ಶಿಕ್ಷಣದಲ್ಲಿ ಹುಡುಗರು ಹುಡುಗಿಯ ಹಿಂದೆ ಮುಂದೆ ಸುತ್ತಿ ತಮ್ಮ ಸಮಯ ಮತ್ತು ಭವಿಷ್ಯವನ್ನೆ ಹಾಳುಮಾಡಿಕೊಳ್ಳುತ್ತಾರೆಂಬುದನ್ನು ಈ ಚಿತ್ರದಲ್ಲಿ ವೀಕ್ಷಿಸಬಹುದಾಗಿದೆ. ಹುಡುಗಿಯರು ಯಾವ ವಿಷಯಕ್ಕೂ ತಲೆಕೆಡಿಕೊಳ್ಳದೆ ತಮ್ಮ ಕೆಲಸವಾಗಿರಬಹುದು ಅಥವಾ ಶಿಕ್ಷಣವಾಗಿರಬಹುದು ತಮ್ಮ ಪಾಡಿಗೆ ತಾವು ಮಾಡಿಕೊಳ್ಳುತ್ತಾರೆ. ಆದರೆ ಹುಡುಗರು ಅವರ ಹಿಂದೆ ಸುತ್ತಿ ತಮ್ಮ ವಿದ್ಯಾಬ್ಯಾಸ ಕೆಲಸಗಳನ್ನು ಜವಾಬ್ದಾರಿಗಳನ್ನು ಮರೆಯುತ್ತಾರೆ. ಇಲ್ಲಿ ಹುಡುಗಿ ಓದಿ ಪಾಸಾಗಿ ಮುಂದೆ ಹೋಗಿದ್ದಾಳೆ. ಆದರೆ ಹುಡುಗ ನಪಾಸಾಗಿ ಹಿಂದೆ ಉಳಿದಿದ್ದಾನೆ ಎಂಬುದನ್ನು ಹಾಸ್ಯಾಸ್ಪದವಾಗಿ ತೋರಿಸಲಾಗಿದೆ.

೧೦. ಈ ಚಿತ್ರದಲ್ಲಿ ಕೆಲವು ಪೋಷಕರು ವಿದ್ಯಾಭ್ಯಾಸಮಾಡದೆ ಅವಿದ್ಯಾವಂತರಾಗಿದ್ದಾರೆ. ಅವರು ಸಹ ತಮ್ಮ ಮಕ್ಕಳ ಜೊತೆ ಈಗ ಶಿಕ್ಷಣವನ್ನು ಪಡೆಯಲು ಹೋಗುತ್ತಿದ್ದಾರೆಂಬುದನ್ನು ಇಲ್ಲಿ ನೋಡಬಹುದಾಗಿದೆ. ಅಲ್ಲದೆ ಇವತ್ತಿನ ದಿನಗಳಲ್ಲಿ ವಯಸ್ಕರ ಶಿಕ್ಷಣಕ್ಕೆ ಸರಕಾರಗಳು ಸಂಜೆ ವೇಳೆಗೆ ಅವಕಾಶ ಕಲ್ಪಿಸಿಕೊಟ್ಟಿದೆ. ಆದರೆ ಮಕ್ಕಳೊಂದಿಗೆ ಪೋಷಕರು ತಮ್ಮ ಅಕ್ಷರ ಕಲಿಕೆಯನ್ನು ಆರಂಭಿಸಿರುವುದು ಈ ಚಿತ್ರದಲ್ಲಿ ಸ್ಪಷ್ಟವಾಗಿ ತಿಳಿಯುವಂತೆ ಚಿತ್ರಿಸಲಾಗಿದೆ.

೧೧. ಈ ಚಿತ್ರದಲ್ಲಿ ಇವತ್ತಿನ ದಿನಗಳಲ್ಲಿ ಎಲ್ಲಾ ಕಡೆಯಲ್ಲಿ ಚಿಲ್ಲರೆಯ ತೊಂದರೆಯನ್ನು ನೋಡುತ್ತಿದ್ದೇವೆ. ಬಸ್ಸುಗಳಲ್ಲಿ, ಮಾರುಕಟ್ಟೆಗಳಲ್ಲಿ, ಅಂಗಡಿಗಳಲ್ಲಿ ಒಟ್ಟಾರೆಯಾಗಿ ದಿನನಿತ್ಯದ ಕೊಡು ಕೊಂಡುಕೊಳ್ಳುವಿಕೆಯಲ್ಲಿ ನಾವು ನೋಡಬಹುದಾಗಿದೆ. ನಾವು ಸಾಮಾನ್ಯವಾಗಿ ಭಿಕ್ಷುಕರಿಗೆ ಚಿಲ್ಲರೆ ಹಣವನ್ನು ಮಾತ್ರಕೊಡುತ್ತೇವೆ ಅಂದರೆ ೧ ರೂಪಾಯಿಯನ್ನು ಕೊಟ್ಟು ಐವತ್ತು ಪೈಸೆಯನ್ನು ಹಿಂದಕ್ಕೆ ಪಡೆದುಕೊಳ್ಳುತ್ತಿವೆ. ಆದರೆ ಇವತ್ತಿನ ದಿನಗಳಲ್ಲಿ ಇವರು ಸಹ ನೋಟುಗಳನ್ನು ಬೆಡುತ್ತಾರೆಂಬುದನ್ನು ಇಲ್ಲಿ ಹಾಸ್ಯಾಸ್ಪದವಾಗಿ ಚಿತ್ರಿಸಲಾಗಿದೆ. ಬಿಕ್ಷುಕರಲ್ಲಿಯು ಸಹ ಚಿಲ್ಲರೆ ಅಭಾವವನ್ನು ತೋರಿಸುವ ಸಲುವಾಗಿ ತನ್ನ ಮುಂದೆ ಬೋರ್ಡ್‌ನ್ನು ಹಾಕಿಸಿಕೊಂಡಿರುವುದನ್ನು ಇಲ್ಲಿ ನೋಡಬಹುದಾಗಿದೆ.

೧೨. ಈ ಚಿತ್ರದಲ್ಲಿ ನಮ್ಮ ರಾಜಕೀಯ ವ್ಯಕ್ತಿಗಳು ತಮಗೆ ಮನಬಂದಂತೆ ಕೆಲವು ಊರುಗಳಿಗೂ ಕೆಲಸಗಳಿಗೋ ಹಣವನ್ನು ಮಂಜೂರು ಮಾಡುತ್ತಾರೆ. ಒಂದೊಂದು ಸಲ ಕೆಲವು ಆರ್ಥಿಕವಾಗಿ ವ್ಯವಸ್ಥೆಯಿಂದ ವಂಚಿತವಾದ ಸ್ಥಳಗಳನ್ನು ಬಿಟ್ಟು ಸಾಕಷ್ಟು ಅಭಿವೃದ್ಧಿ ಹೊಂದಿದ ಸ್ಥಳಗಳಿಗೆ ಹಣಗಳನ್ನು ಬಿಡುಗಡೆ ಮಾಡುತ್ತಾರೆಂಬುದನ್ನು ಹಾಸ್ಯವಾಗಿ ಚಿತ್ರಿಸಲಾಗಿದೆ. ಇದನ್ನೆ ನಮ್ಮ ಸಮಾಜದ ಜನರು ಯಾವ ರೀತಿಯಾಗಿ ಯೋಚನೆ ಮಾಡಿ ಇದನ್ನು ಹಾಸ್ಯವಾಗಿ ಸ್ವೀಕರಿಸುತ್ತಾರೆಂಬುದನ್ನು ನಾವು ನೋಡಬಹುದಾಗಿದೆ.

**ವಸ್ತು ಘಟನೆ ಆಧಾರಿತ ವ್ಯಂಗ್ಯಚಿತ್ರ**

ನಿರ್ದಿಷ್ಟ ವಸ್ತು ಅಥವಾ ಘಟನೆ ಆಧಾರಿತ ವ್ಯಂಗ್ಯಚಿತ್ರಗಳು ಸಾಕಷ್ಟಿವೆ. ಉದಾಹರಣೆಗೆ ವಿವಿಧ ಕ್ರೀಡೆಗಳಿಗೆ ಸಂಬಂಧಿಸಿದಂತೆ ವ್ಯಂಗ್ಯಚಿತ್ರಗಳು ರಚನೆಯಾಗುತ್ತಲೇ ಇವೆ. ಆಯಾ ಕಾಲದಲ್ಲಿ ಜನಪ್ರೀಯರಾದ

ಕ್ರೀಡಾಪಟುಗಳು ವ್ಯಂಗ್ಯಚಿತ್ರಕಾರರ ಗಮನಸೆಳೆಯುತ್ತಾರೆ. ಭಾರತದ ಟೆನ್ನಿಸ್ ತಾರೆ ಸಾನಿಯಾ ಮಿರ್ಜಾ ತಮ್ಮ ಖ್ಯಾತಿಯ ಉತ್ತುಂಗದಲ್ಲಿದ್ದಾಗ ಅನೇಕ ಕಾರ್ಟೂನಿಸ್ಟರ್ ಗೆರೆಗಳಲ್ಲಿ ಮೂಡಿದ್ದಳು. ಸಾನಿಯಾ ಬಗ್ಗೆ ಜನರಿಗೆ ಇರುವ ಕ್ರೇಜ್ ಕೂಡ ವ್ಯಂಗ್ಯಚಿತ್ರಗಳಿಗೆ ವಸ್ತುವಾಗಿತ್ತು. ಕ್ರಿಕೆಟ್ ಆಟಗಾರರು ಕೂಡ ಆಗಾಗ ಕಾರ್ಟೂನಿಗರಿಗೆ ಗ್ರಾಸ್ ಒದಗಿಸುತ್ತಿರುತ್ತಾರೆ. ಹೀಗೆ ಆಯಾ ಕಾಲದ ಪ್ರಸಿದ್ಧಿಯನ್ನು ಪಡೆದಂತಹ ವ್ಯಕ್ತಿಗಳನ್ನು ಆಚಾರವಾಗಿದ್ದುಕೊಂಡು ಚಿತ್ರಗಳನ್ನು ನಮ್ಮ ಕಲಾವಿದರು ರಚಿಸುತ್ತಿದ್ದಾರೆ.

ವಿವಿಧ ಆಚರಣೆಗಳು ಕೂಡ ವ್ಯಂಗ್ಯಚಿತ್ರಗಳಿಗಾಗಿ ಅಭಿವ್ಯಕ್ತಗೊಳ್ಳುತ್ತವೆ. ದೀಪಾವಳಿ ಸಂದರ್ಭದಲ್ಲಿ ಬೆಳಕಿನ ಹಬ್ಬಕ್ಕೆ ಸಂಬಂಧಿಸಿದಂತೆ, ಗಣೇಶನ ಚತುರ್ಥಿಗೆ ಸಂಬಂಧಿಸಿದಂತೆ, ಯುಗಾದಿಗೆ ಹಬ್ಬಕ್ಕೆ ಸಂಬಂಧಿಸಿದಂತೆ ಇನ್ನೂ ಅನೇಕ ರಾಷ್ಟ್ರೀಯ ಹಬ್ಬಗಳಿಗೆ ಸಂದರ್ಭದಲ್ಲಿ ಪ್ರತಿವರ್ಷವೂ ವ್ಯಂಗ್ಯಚಿತ್ರಗಳು ವಿವಿಧ ರೀತಿಯಲ್ಲಿ ರಚನೆಯಾಗುತ್ತವೆ. ಅಂತೆಯೇ ಸಮಾಜದಲ್ಲಿನ ನೋವುನಲಿವುಗಳು ಕೂಡ ಗೆರೆಗಳಲ್ಲಿ ನಮ್ಮ ಮುಂದೆ ಚಿತ್ರಗಳಾಗಿ ನಮ್ಮನ್ನು ರಂಜಿಸುತ್ತವೆ.

ಘಟನೆ ಆಧರಿತ ವ್ಯಂಗ್ಯಚಿತ್ರಗಳು ಎಲ್ಲ ಕಾಲದಲ್ಲೂ ಇರುತ್ತವೆ. ಇಂಥ ವ್ಯಂಗ್ಯಚಿತ್ರಗಳು ಆಯಾ ಸಂದರ್ಭದಲ್ಲಿ ಅಪಾರ ಜನಮನ್ನಣೆಯನ್ನು ಪಡೆದಿರುತ್ತವೆ. ಉದಾಹರಣೆಗೆ, ಯುದ್ಧ ಕಾಲದ ವ್ಯಂಗ್ಯಚಿತ್ರಗಳು, ಎರಡನೇ ಮಹಾಯುದ್ಧದ ಕಾಲದಲ್ಲಿ ಜಗತ್ತಿನೆಲ್ಲೆಡೆ ಯುದ್ಧದ ಪರಿಣಾಮಗಳನ್ನು ಬಿಂಬಿಸುವ ಹಾಗೂ ಯುದ್ಧಕ್ಕೆ ಕಾರಣರಾದ ನಾಯಕರನ್ನೂ ಟೀಕಿಸುವ ವ್ಯಂಗ್ಯಚಿತ್ರಗಳು ರಚನೆಯಾದವು. ಅಲ್ಲದೆ ಹೊಸ ಹೊಸ ಆವಿಷ್ಕಾರದಂತಹ ಘಟನೆಗೆ ಆಧರಿಸಿದಂತಹ ಚಿತ್ರಗಳು ಉದಾ: ಹೊರ ದೇಶದ ಆಚರಣೆಗಳನ್ನು ನಮ್ಮ ದೇಶಕ್ಕೆ ವರ್ಗಾಯಿಸುವಂತಹ ಕೆಲವು ಸನ್ನಿವೇಶಗಳು ಹಾಗೂ ಘಟನೆಗೆ ಸಂಬಂಧಿಸಿದಂತ ಚಿತ್ರಗಳು ರಚನೆಯಾಗಿವೆ.

ನಮ್ಮ ಭಾರತದಲ್ಲಿ ಅನೇಕ ಜನ ರಾಜಕೀಯ ವ್ಯಕ್ತಿಗಳಂತಹ ಉದಾಹರಣೆ ಇಂದಿರಾಗಾಂಧಿ ಅವರು ಪ್ರಧಾನಿಯಾಗಿದ್ದಾಗ ದೇಶದಲ್ಲಿ ಹೇರಿಕೆಯಾದ ತುರ್ತು ಪರಿಸ್ಥಿತಿ ಕೂಡ ವ್ಯಂಗ್ಯಚಿತ್ರಗಾರರಿಗೆ ಸ್ಫೂರ್ತಿ ಒದಗಿಸಿದ್ದಿತು. ತುರ್ತು ಪರಿಸ್ಥಿತಿ ಸಂದರ್ಭದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ಮೊಟಕಾಗಿದ್ದರೂ ವ್ಯಂಗ್ಯಚಿತ್ರಕಾರರು ದಿಟ್ಟತನ ಪ್ರದರ್ಶಿಸಿ ಪರಿಣಾಮಕಾರಿಯಾದ ಚಿತ್ರಗಳನ್ನು ರೂಪಿಸಿದರು. ಜನ ಸಾಮಾನ್ಯರ ಭಾವನೆಗಳಿಗೆ ಧ್ವನಿಯಾಗುವ ಪ್ರಯತ್ನವನ್ನು ಕರ್ನಾಟಕದ ವ್ಯಂಗ್ಯ ಚಿತ್ರಗಾರರು ನಿರಂತರವಾಗಿ ಮಾಡುತ್ತಲೇ ಬಂದಿದ್ದಾರೆ. ಪ್ರಸ್ತುತ ದಿನಗಳಲ್ಲೂ ಮಾಡುತ್ತಿರುವುದನ್ನು ದಿನ ನಿತ್ಯ ನಿಯತಕಾಲಿಕೆಗಳಲ್ಲಿ ನಾವು ಗಮನಿಸಬಹುದಾಗಿದೆ.

## ಮುದ್ರಣ ಮಾಧ್ಯಮದಲ್ಲಿ ವ್ಯಂಗ್ಯಚಿತ್ರಗಳ ಪಾತ್ರ

ಸಂವಹನದ ಒಂದು ಅಂಗವಾಗಿ ಪತ್ರಿಕೆಗಳು ರೂಪುಗೊಂಡು ಜನಪ್ರಿಯವಾದವು ಸರಿಯಷ್ಟೆ. ಈ ಪತ್ರಿಕೆಗಳ ಬೆಳವಣಿಗೆ ಈ ವ್ಯಂಗ್ಯಚಿತ್ರಗಳ ಬೆಳವಣಿಗೆಯೂ ಹೌದು. ಆರಂಭದಲ್ಲಿ ಪತ್ರಿಕೆ ಪುಟಗಳಲ್ಲಿನ ಸುದ್ದಿಗಳ ಏಕತಾನತೆ ತಪ್ಪಿಸಲು ಈ ಕಾರ್ಟೂನ್‌ಗಳ ಬಳಕೆ ಜಾರಿಗೆ ಬಂತು. ಓದುಗರಿಂದಲೂ ವ್ಯಂಗ್ಯಚಿತ್ರಗಳ ಬಗ್ಗೆ ಉತ್ತಮ ಪ್ರತಿಕ್ರಿಯೆ ವ್ಯಕ್ತವಾಯಿತು. ಕೆಲವೊಮ್ಮೆ ಸುದ್ದಿಗಳು ಓದುಗರಿಗೆ ಮುಟ್ಟಿಸಲು ಸಾಧ್ಯವಾಗದೆ

ಹೋದುದನ್ನು ವ್ಯಂಗ್ಯಚಿತ್ರಗಳು ವ್ಯಕ್ತಪಡಿಸುತ್ತಿದ್ದವು. ಅಲ್ಲದೆ ಸರಳವಾಗಿ ಎಲ್ಲಾ ರೀತಿಯ ವರ್ಗದ ಜನತೆಗೆ ಸುಲಭವಾಗಿ ತಿಳಿದುಕೊಳ್ಳಬಹುದಾಗಿದೆ.

ಈಗಂತೂ, ಧಾರ್ಮಿಕ ಪತ್ರಿಕೆಗಳನ್ನು ಹಾಗೂ ಕೆಲವು ನಿರ್ಧಿಷ್ಟ ವಿಷಯಕ್ಕೆ ಸಂಬಂಧಿಸಿದ ನಿಯತಕಾಲಿಕೆಗಳನ್ನು ಹೊರತುಪಡಿಸಿದಂತೆ ಉಳಿದೆಲ್ಲ ಪತ್ರಿಕೆಗಳಲ್ಲಿ ಕಾರ್ಟೂನ್ ಬಳಕೆಯಾಗುತ್ತಿದೆ. ರಾಜಕೀಯ, ಸಾಮಾಜಿಕ, ಕ್ರೀಡೆ, ಸಿನಿಮಾ ಹೀಗೆ ಸಾಮಾನ್ಯವಾಗಿ ಎಲ್ಲ ಪತ್ರಿಕೆಗಳಲ್ಲೂ ಕಾರ್ಟೂನ್ ಸಾಮಾನ್ಯವಾಗಿವೆ. ಇದು ಊಟದಲ್ಲಿ ಉಪ್ಪಿನಕಾಯಿ ಇದ್ದಂತೆ. ಒಂದು ವಿಷಯವನ್ನು ಎಷ್ಟೇ ಸರಳವಾಗಿ ಬರೆದರೂ, ಛಾಯಾಚಿತ್ರವನ್ನು ಬಳಸಿದರೂ ಎಲ್ಲರಿಗೂ ಅರ್ಥವಾಗುತ್ತದೆ ಎಂದು ಹೇಳಲಾಗದು. ಅದೇ ಒಂದು ಸಮರ್ಥ ವ್ಯಂಗ್ಯಚಿತ್ರ, ಹೇಳಬೇಕಾದ ವಿಷಯವನ್ನು ಓದುಗರಿಗೆ ಅರ್ಥಮಾಡಿಸುತ್ತದೆ. ವಿಚಾರದ ಸಂವಹನದೊಂದಿದೆ ತುಟಿಯಲ್ಲಿ ನಗುವನ್ನೂ ಮೂಡಿಸುತ್ತದೆ. ಮನೋವಿಕಾಸ ಹಾಗೂ ಮನರಂಜನೆ ಎರಡೂ ವ್ಯಂಗ್ಯಚಿತ್ರಗಳಿಂದ ಲಭ್ಯವಾಗುತ್ತದೆ. ಅಲ್ಲದೆ ಅವಿದ್ಯಾವಂತಹ ಜನರಿಗೂ ನೋಡುತ್ತಲೆ ಸಂಪೂರ್ಣವಾಗಿ ಸನ್ನಿವೇಶದ ಈ ಚಿತ್ರಗಳಲ್ಲಿ ನೋಡಿ ತಿಳಿದುಕೊಳ್ಳಬಹುದು.

ವ್ಯಂಗ್ಯಚಿತ್ರಗಳ ಜನಪ್ರಿಯತೆ ಎಷ್ಟರಮಟ್ಟಿಗೆ ಇದೆಯೆಂದರೆ, ಸುದ್ಧಿಯೊಂದನ್ನು ಚರ್ಚಿಸಿದಂತೆ ಪತ್ರಿಕೆಯಲ್ಲಿನ ವ್ಯಂಗ್ಯಚಿತ್ರಗಳು ಜನಸಾಮಾನ್ಯರ ನಡುವೆ ಚರ್ಚೆಗೊಳಗಾಗುತ್ತವೆ. ಪರಿಣಾಮಕಾರಿ ವ್ಯಂಗ್ಯಚಿತ್ರವೊಂದು ವ್ಯವಸ್ಥೆಯ ಹುಳುಕುಗಳನ್ನು ಎತ್ತಿತೋರಿಸುವ ಜೊತೆಗೆ ನಾಗರಿಕರಲ್ಲಿ ಜಾಗೃತಿಯನ್ನೂ ಮೂಡಿಸುತ್ತದೆ. ಆ ಕಾರಣದಿಂದಲೇ ಒಳ್ಳೆಯ ಪತ್ರಕರ್ತನೊಬ್ಬ ಜನಸಾಮಾನ್ಯರ ನಡುವೆ ಜನಪ್ರಿಯತೆಗಳಿಸುವಂತೆ, ಒಳ್ಳೆಯ ಕಾರ್ಟೂನಿಸ್ಟ್ ಕೂಡ ಜನಮನ್ನಣೆಗಳಿಸುತ್ತಾನೆ. ಪತ್ರಕರ್ತನೊಬ್ಬ ತನ್ನದೇ ಭಾಷೆ, ಶೈಲಿ ಸಿದ್ಧಿಸಿಕೊಂಡಂತೆ ಕಾರ್ಟೂನಿಗೆ ಕೂಡ ತನ್ನದೇ ಆದ ಶೈಲಿ ರೂಢಿಸಿಕೊಳ್ಳುತ್ತಾನೆ. ಆತ ಸೃಷ್ಟಿಸುವ ಪಾತ್ರಗಳು ಸಹೃದಯರಿಗೆ ಚಿರಪರಿಚಿತವಾಗಿರುತ್ತದೆ. ಅಷ್ಟುಮಾತ್ರವಲ್ಲ ಆ ಪಾತ್ರಗಳು ಗೆಳೆಯರಂತೆ, ನೆರೆಹೊರೆಯವರಂತೆ ಅನ್ನಿಸಲು ಭಾಸವಾಗುತ್ತದೆ. ಈ ನಿಟ್ಟಿನಲ್ಲಿ ಅನೇಕ ಜನ ಹಿರಿಯ ಕಲಾವಿದರನ್ನು ಉದಾಹರಿಸಬಹುದಾಗಿದೆ.

ಪ್ರಸ್ತುತ ದಿನಗಳಲ್ಲಿ ಜನಪ್ರಿಯ ವ್ಯಂಗ್ಯಚಿತ್ರಕಾರರ ಕಾರ್ಟೂನ್‌ಗಳು ಪುಸ್ತಕ ರೂಪದಲ್ಲಿ ಪ್ರಕಟವಾಗುತ್ತಿರುವುದು ಕೂಡ ಅವುಗಳ ಜನಪ್ರಿಯತೆಯನ್ನು ಸೂಚಿಸುತ್ತದೆ. ಭಾರತೀಯ ವ್ಯಂಗ್ಯಚಿತ್ರ ಕ್ಷೇತ್ರವನ್ನು ಗಮನಿಸಿದರೆ, ಆರ್.ಕೆ. ಲಕ್ಷ್ಮಣ ಅವರ ಕಾರ್ಟೂನ್‌ಗಳನ್ನೊಳಗೊಂಡ ಕೆಲವು ಸಂಪುಟಗಳೇ ಪ್ರಕಟಗೊಂಡಿವೆ. ಇಂಗ್ಲಿಷ್‌ನಲ್ಲಿ ಮಾತ್ರವಲ್ಲ, ಕನ್ನಡದಲ್ಲೂ ಇಂಥ ಕಾರ್ಟೂನ್ ಆಲ್ಬಂಗಳು ಪ್ರಕಟಗೊಂಡಿವೆ. ಅಲ್ಲದೆ ಕೆಲವು ಕಲಾವಿದರ ಸಂಕಲನಗಳನ್ನು ನಾವು ನೋಡಬಹುದಾಗಿದೆ.

ಜಾನ್ ಲೀಕ್ ಅವರ ಅಣಕು ಕಲಾಕೃತಿಯಾದ 'ನ್ಯೂ ಪ್ಯಾಲೆಸ್ ಆಫ್ ವೆಸ್ಟಿಮರ್' (೧೮೪೩), ಕಾರ್ಟೂನ್ ಎಂಬ ಪದಕ್ಕೆ ವಿಶ್ವದಲ್ಲಿ ಒಂದು ಹೊಸ ಅರ್ಥವನ್ನು ಕೊಟ್ಟಿತು. ಮುದ್ರಣ ಮಾಧ್ಯಮದಲ್ಲಿ ಕಾರ್ಟೂನ್ ಎಂದರೆ ವ್ಯಂಗ್ಯ ಅಥವಾ ಅಣಕು ಚಿತ್ರ ಎನ್ನಲಾಗುತ್ತದೆ. ಇಂತಹ ಚಿತ್ರಗಳು ೧೮೪೩ ರಿಂದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿವೆ. ಪಂಚ್ ಪತ್ರಿಕೆ ಅಣಕು ಚಿತ್ರಗಳನ್ನು ಪ್ರಕಟಿಸುವಲ್ಲಿ ಮುಂಚೂಣಿಯಲ್ಲಿದೆ.

ಇಂತಹ ಅಣಕು ಚಿತ್ರಗಳನ್ನು ಬರೆದವರಲ್ಲಿ ಜಾನ್ ಲೀಕ್ ಮೊದಲಿಗರು. 'ಮಿ ಪಂಚಸ್' ಎಂಬ ಹೆಸರಿನ ಅವರ ಚಿತ್ರಗಳಲ್ಲಿ ರಾಜಕೀಯ ವಿಡಂಬನೆ ಇರುತ್ತಿತ್ತು.[೫]

ಏಕ ಅಂಕಣ ಕಾರ್ಟೂನ್ ಅಥವಾ ಮೋಜಿನ ಚಿತ್ರಗಳು ಹೆಚ್ಚಾಗಿ ದಿನಪತ್ರಿಕೆ ಮತ್ತು ಪತ್ರಿಕೆಗಳಲ್ಲಿ ಬರುತ್ತವೆ. ಇವು ಸಾಮಾನ್ಯವಾಗಿ ಸ್ಪೀಚ್ ಬಲೂನ್‌ಗಳನ್ನು ಹೊಂದಿರುತ್ತವೆ. ನ್ಯೂಯಾರ್ಕ್‌ನ ಕಾರ್ಟೂನಿಸ್ಟ್ 'ಪೀಟರ್ ಅರ್ನೋ‌ಗ್ಯಾಗ್' ಅವರನ್ನು 'ಕಾರ್ಟೂನ್ ಪಿತಾಮಹ' ಎಂದು ಕರೆಯಲಾಗುತ್ತದೆ. ಗ್ಯಾಗ್ ಅಲ್ಲದೇ, ಚಾರ್ಲ್ಸ್ ಆ್ಯಡಮ್ಸ್, ಗ್ಯಾರಿ ಲಾರ್‍ಸನ್, ಚಾರ್ಲ್ಸ್ ಬಲ್‌ಸೊಟ್ಟಿ, ಬೋನ್ ಡೇ ಮತ್ತು ಮೆಲ್ ಕಾಲ್ಮನ್ ಮತ್ತಿತರ ಕಾರ್ಟೂನಿಸ್ಟ್‌ಗಳು, ಕಾರ್ಟೂನ್‌ನ ಆರಂಭಿಕ ದಿನಗಳಲ್ಲಿ ಸಾಕಷ್ಟು ಕೆಲಸ ಮಾಡಿದ್ದಾರೆ.

ಸಂಪಾದಕೀಯ ವ್ಯಂಗ್ಯಚಿತ್ರ (ಎಡಿಟೋರಿಯಲ್ ಕಾರ್ಟೂನ್) ಒಂದು ಗ್ಯಾಗ್ ಕಾರ್ಟೂನ್ (ಅಣಕು ಚಿತ್ರ) ಆಗಿದ್ದು, ಪತ್ರಿಕೆಗಳು ಮತ್ತು ನ್ಯೂಸ್ ವೆಬ್‌ಸೈಟ್‌ಗಳಲ್ಲಿ ಕಂಡುಬರುತ್ತವೆ. ಈ ಚಿತ್ರ ವ್ಯಂಗ್ಯದ ಜತೆಗೆ ಗಾಂಭೀರ್ಯದಿಂದ ಕೂಡಿದ್ದು, ಪ್ರಸಕ್ತ ಸಾಮಾಜಿಕ/ರಾಜಕೀಯ ಸ್ಥಿತಿಗತಿಗಳನ್ನು ಬಿಂಬಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಈ ಎಡಿಟೋರಿಯಲ್ ಕಾರ್ಟೂನ್‌ಗಳು ಕೆಲವೊಮ್ಮೆ ಸ್ಪೀಚ್ ಬಲೂನ್‌ಗಳನ್ನು ಹೊಂದಿರುತ್ತವೆ. ಅಲ್ಲದೆ ಬಹು ಆಯಾಮಗಳಿಂದಲೂ ಕೂಡಿರುತ್ತವೆ. ಹರ್‌ಬ್ಲೋಕ್, ಮೈಕ್ ಪೀಟರ್ಸ್, ಡೆವಿಡ್ ಲೋ, ಜೆಫ್ ಮಾರ್ಕ್‌ಸಿಲ್ ಮತ್ತು ಗೋಲ್ಡ್ ಸ್ನೇರ್ಫ್ ಮತ್ತಿತರ ಹಿರಿಯ ಎಡಿಟೋರಿಯಲ್ ಕಾರ್ಟೂನಿಸ್ಟ್‌ಗಳು ಇವರೆಲ್ಲರೂ ಈ ವಿಭಾಗವನ್ನು ಸಮೃದ್ಧಗೊಳಿಸಿದ್ದಾರೆ.[೬]

ಹಾಸ್ಯ ತುಣುಕುಗಳನ್ನು ಕಾಮಿಕ್ ಸ್ಟ್ರೀಪ್ ಕಾರ್ಟೂನ್ ಸ್ಟ್ರೀಪ್ ಎಂದೂ ಹೇಳಲಾಗುತ್ತದೆ. ಪ್ರಪಂಚದಾದ್ಯಂತ ಪ್ರಸಾರಹೊಂದಿದ ಇಂಗ್ಲೆಂಡ್‌ನ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ವ್ಯಂಗ್ಯ ಚಿತ್ರಗಳ ಸರಣಿಗೆ ಓದುಗರಿಂದ ಉತ್ತಮ ಪ್ರತಿಕ್ರಿಯೆ ವ್ಯಕ್ತವಾಗಿತ್ತು. ಮಕ್ಕಳು, ದೊಡ್ಡವರು ಎನ್ನುವ ಭೇದವಿಲ್ಲದೇ ಈ ಕಾರ್ಟೂನ್ ಸ್ಟ್ರೀಪ್‌ಗಳು ಎಲ್ಲರಿಗೂ ಇಷ್ಟವಾಗಿದ್ದವು. ಬ್ರಿಟನ್‌ನಲ್ಲಿ 'ಕಾರ್ಟೂನ್ ಸ್ಟ್ರೀಪ್' ಎಂದು ಇವುಗಳನ್ನು ಕರೆದರೆ, ಅಮೇರಿಕಾದಲ್ಲಿ ಕಾರ್ಟೂನ್ ಬದಲು 'ಕಾಮಿಕ್' ಅಥವಾ 'ಫನ್ನಿಸ್' ಎಂದು ಕರೆಯಲಾಗುತ್ತದೆ. ಅಲ್ಲದೆ, ಹಾಸ್ಯ ತುಣುಕು ಮತ್ತು ಚಿತ್ರಗಳುಳ್ಳ ಕಾದಂಬರಿ ರಚಿಸುವವರನ್ನೂ ಕಾರ್ಟೂನಿಸ್ಟ್‌ಗಳೆಂದೇ ಕರೆಯಲಾಗುತ್ತದೆ.

ಸಾಹಸ ಮತ್ತು ನಾಟಕಗಳನ್ನು ಈ ಮಾಧ್ಯಮದಲ್ಲಿ ನಿರೂಪಿಸಿದರೂ ಹಾಸ್ಯವೇ ಪ್ರಮುಖ ವಸ್ತುವಾಗಿತ್ತು. ಇಂಥ ಕಾಮಿಕ್ ಸ್ಟ್ರೀಪ್ ರಚನೆ, ನಗೆಯನ್ನು ಹಂಚಿದವರಲ್ಲಿ ಚಾರ್ಲ್ಸ್ ಸ್ಕೂಲ್ಜ್, ಬಿಲ್ ವ್ಯಾಟರ್‌ಸನ್, ಸ್ಕಾಟ್ ಆ್ಯಡವ್ಸ್, ಮಾರ್ಟ್ ವಾಕರ್, ಸ್ಟೀವ್ ಜಿಲ್ ಮೊದಲಿಗರು ಎನ್ನುವುದು ನಾವು ನೆನಪಿಸಿಕೊಳ್ಳಬಹುದಾಗಿದೆ.

**ಚಲನ ಶೀಲ ಚಿತ್ರಗಳು**

**(ಮೋಷನ್ ಪಿಕ್ಚರ್ ಅಥವಾ ಅನಿಮೇಷನ್)**

ಇವತ್ತಿನ ಈ ವ್ಯಂಗ್ಯಚಿತ್ರಗಳು ಬೆಳೆದಂತೆ, ಅವುಗಳಿಗೆ ಆಧುನಿಕ ಸ್ವರೂಪ ನೀಡುವ ಪ್ರಯತ್ನಗಳೂ ನಡೆದವು. ಇಂತಹ ಯತ್ನಗಳು ಕ್ಷೇತ್ರವನ್ನು ಇನ್ನಷ್ಟು ವಿಸ್ತಾರಗೊಳಿಸುವಲ್ಲಿ ಫಲಕಾರಿಯಾದವು. ೧೯ನೇ

೦೫. ರಘುನಾಥ ಚ.ಹ : ವ್ಯಂಗ್ಯ ಚಿತ್ರ ವಿಶ್ವರೂಪ ; ಪುಟ ಸಂಖ್ಯೆ-೬೯

೦೬. ರಘುನಾಥ ಚ.ಹ : ವ್ಯಂಗ್ಯ ಚಿತ್ರ ವಿಶ್ವರೂಪ ; ಪುಟ ಸಂಖ್ಯೆ-೭೦

ಶತಮಾನದಲ್ಲಿ ಎಡ್ವರ್ಡ್ ಮೈಬ್ರಿಡ್ಜ್ ಅವರು ಚಲಿಸುವ ಕುದುರೆಗಳ ಅನಿಮೇಟೆಡ್ ಕಾರ್ಟೂನ್‌ಗಳನ್ನು ಬರೆದರು. ತುಸು ವ್ಯತ್ಯಾಸದೊಂದಿಗೆ ಒಂದೇ ರೀತಿಯ ಕುದುರೆ ಚಿತ್ರಗಳನ್ನು ಬರೆದರು. ಆ ಚಿತ್ರಗಳಲ್ಲಿ ಚಲನೆ ಕಾಣುವಂತೆ ಅವರು ಚಿತ್ರಿಸಿದಂತಹ ಜಾಣ್ಮೆಯನ್ನು ನಾವು ನೋಡಿ ತಿಳಿದುಕೊಳ್ಳಬಹುದಾಗಿದೆ.

ಚಲಿಸುವ ಚಿತ್ರಗಳು (ಅನಿಮೇಷನ್) ಮತ್ತು ಹಾಸ್ಯ ತುಣುಕುಗಳಲ್ಲಿ (ಕಾಮಿಕ್ ಸ್ಟ್ರೀಪ್) ಸಾಮ್ಯತೆ ಇರುವುದರಿಂದ ಇವುಗಳನ್ನು ಕೂಡ ಕಾರ್ಟೂನ್ ಎಂದೇ ಕರೆಯಲಾಯಿತು. ಬಿಡಿಸಿದ ಚಿತ್ರಗಳಿಗೆ ಅನುಕ್ರಮ ಚಲನೆ ನೀಡಿದಾಗ ಅವು ಚಲಿಸಿದಂತೆ ನೈಜವಾಗಿ ಮೂಡಿಬರುತ್ತದೆ. ಇದೇ ತಂತ್ರಜ್ಞಾನವನ್ನು ಬಳಸಿ ಚಲನಚಿತ್ರಗಳ ನಿರ್ಮಾಣ ಮಾಡಲಾಗುತ್ತದೆ. ಇತ್ತೀಚಿನ ದಿನಗಳಲ್ಲಂತೂ ಅನಿಮೇಷನ್ ಆಧಾರಿತ ಕಾರ್ಟೂನ್ ಚಿತ್ರಗಳು ಕಿರುತೆರೆಯಲ್ಲಿ ಹೆಚ್ಚಿನ ಜನಪ್ರಿಯತೆ ಪಡೆದಿದೆ. ಮಕ್ಕಳಿಗೆ ಪೋಗೊ, ಕಾರ್ಟೂನ್ ನೆಟ್‌ವರ್ಕ್ ಚಾನೆಲ್‌ಗಳೆಂದರೆ ಪ್ರಾಣ. ಮಕ್ಕಳ ಕಾರ್ಯಕ್ರಮ, ನಾಟಕ/ಕಲೆ, ಪ್ರಾಣಿಗಳ ಆಧಾರಿತ ಕತೆಗಳು ಸೇರಿದಂತೆ ಹಲವು ರೂಪಗಳಲ್ಲಿ ಈ ಅನಿಮೇಷನ್ ಬಳಕೆಯಾಗಿ ನಮ್ಮ ಇಂದಿನ ಮಕ್ಕಳಿಗೆ ಕಲಿಕೆಯಲ್ಲಿ ಆಸಕ್ತಿ ಮೂಡುವಂತೆ ಮಾಡಿವೆ.

ಕಾರ್ಟೂನ್ ಮತ್ತು ಕಾರ್ಟೂನ್ ಸ್ಟ್ರೀಪ್‌ಗಳು ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ ಸೇರಿದಂತೆ ಎಲ್ಲ ಪತ್ರಿಕೆಗಳಲ್ಲೂ ಸಾಮಾನ್ಯವಾಗಿ ಮುದ್ರಣಗೊಳ್ಳುತ್ತದೆ. ವಿಶೇಷಾಂಕಗಳಲ್ಲಂತೂ ಇವುಗಳಿಗಾಗಿ ಒಂದಷ್ಟು ಪುಟಗಳನ್ನು ಮೀಸಲಿಡುತ್ತಾರೆ. ಪತ್ರಿಕೆ ಅಥವಾ ನಿಯತಕಾಲಿಕದ ಪುಟಗಳ ಒಂದು ಮೂಲೆಯಲ್ಲಿ ಕಾಣಿಸಿಕೊಳ್ಳುವ ವ್ಯಂಗ್ಯಚಿತ್ರಗಳನ್ನು ನೋಡದೆ ಮುಂದಕ್ಕೆ ಹೋಗುವವರು ಅತಿ ವಿರಳವಾಗಿರುವುದನ್ನು ನೋಡಬಹುದಾಗಿದೆ.

ರಾಜಕೀಯ, ಸಾಮಾಜಿಕ ಹಗರಣಗಳನ್ನು ಎತ್ತಿ ತೋರಿಸುವಂಥ ಅಣಕು ದೃಶ್ಯಗಳು, ಹಾಸ್ಯಗಳು ಇಂದಿನ ದಿನಪತ್ರಿಕೆಗಳಲ್ಲಿ ಸಾಮಾನ್ಯ ಸಂಗತಿಯಾಗಿದೆ. ಇದಲ್ಲದೇ ಒಂದು ಪ್ರಚಲಿತ ವಿದ್ಯಮಾನಕ್ಕೆ ಸಂಬಂಧಪಟ್ಟಂತೆ ಪ್ರಕಟವಾಗುವ ಏಕ ಅಂಕಣಚಿತ್ರ, ಅಣಕು ಚಿತ್ರ ಅಥವಾ ಮುಖಪುಟದಲ್ಲಿ ಪ್ರಕಟವಾಗುವ ಏಕ ಅಂಕಣಚಿತ್ರ, ಅಣಕು ಚಿತ್ರ ಅಥವಾ ಮುಖಪುಟದಲ್ಲಿ ಪ್ರಕಟವಾಗುವ ವ್ಯಂಗ್ಯಚಿತ್ರಗಳು ಸಾರ್ವಜನಿಕ ಚರ್ಚೆಯನ್ನು ಹುಟ್ಟುಹಾಕುತ್ತವೆ. ಅಲ್ಲದೆ ನಮ್ಮ ಮನಸ್ಸಿನಲ್ಲಿ ಅಲೆಗಳೇಳುವಂತೆ ಮಾಡುತ್ತವೆ. ಅಲ್ಲದೆ ಪ್ರಸ್ತುತ ದಿನಗಳಲ್ಲಿ ವ್ಯಂಗ್ಯಚಿತ್ರಗಳ ಬಗ್ಗೆ ಟೀಕಿಸಿರುವುದನ್ನು ನಾವು ನೋಡಬಹುದಾಗಿದೆ.

**ಕ್ಯಾರಿಕೇಟರ್ (Caricature)**

ವ್ಯಕ್ತಿಗಳ ಗುಣದೋಷಗಳನ್ನು ಉತ್ಪ್ರೇಕ್ಷಿಸಿ ಅಸಂಗತವಾಗಿ ಚಿತ್ರಿಸುವ ಭಾವಚಿತ್ರಗಳನ್ನು ವಿಡಂಬನ ಚಿತ್ರಗಳೆಂದು ಕರೆಯಲಾಗುತ್ತದೆ. ಕ್ಯಾರಿಕೇರ್ (Caricare) ಎಂಬ ಇಟಾಲಿಯನ್ ಶಬ್ದದಿಂದ 'ಕ್ಯಾರಿಕೇಚರ್' ಶಬ್ಧದ ಉತ್ಪತ್ತಿಯಾಗಿರುತ್ತದೆ. ಪ್ರಥಮವಾಗಿ ಲಿಯೋನಾರ್ಡೋ ಡಾ ವಿರಚಿಯು ಅನೇಕ ವಿಡಂಬನಾತ್ಮಕ ರೇಖಾಚಿತ್ರಗಳನ್ನು ಚಿತ್ರಿಸಿರುವನಾದರೂ (Carrecci) ಕ್ಯಾರೆಸ್ಸಿ ಎಂಬುವವನ ಗೆಳೆಯರ ಬಳಗವೇ ೧೬ನೆಯ ಶತಮಾನದ "ಕ್ಯಾರಿಕೇಚರ" ಎಂಬ ಪದಕ್ಕೆ ಒಂದು ನಿರ್ದಿಷ್ಟ ರೂಪವನ್ನು ಶೈಲಿಯನ್ನೂ ಸ್ಥಿರಗೊಳಿಸಿತು. ಬೊಲೋನೀಜ ಕಲಾಶಾಲೆಯ ಗೆರ್ಸಿನೋ ಮತ್ತು ಟೊಮನಿಬೆನೋ ಅವರು ಅತ್ಯಂತ ಜಾಣ್ಮೆಯುಳ್ಳ ವಿಡಂಬನಾ

ಚಿತ್ರಕಾರರೆಂದು ಪರಿಗಣಿಸಲ್ಪಟ್ಟಿದ್ದಾರಲ್ಲದೇ ಹೋಗಾರ್ಥ್, ಕ್ರುಯಿಕ್ಷಾಂತ್, ಬೀರ್‌ಬೋಹ್ಮ್ ಮತ್ತು ಚಾಮಿಯರ್‌ರಂಥ ವಿಶ್ವವಿಖ್ಯಾತ ಕಲಾವಿದರೂ ಸಹ ವಿಡಂಬನ ಚಿತ್ರಗಳನ್ನು ಚಿತ್ರಿಸುವದರಲ್ಲಿ ಉನ್ನತ ಸ್ಥಾನಗಳಿಸಿದವರಾಗಿದ್ದಾರೆ.[೭]

ಕಾರ್ಟೂನ್ ಎನ್ನುವ ಶಬ್ದ ಹುಟ್ಟುವ ಮೊದಲು ವ್ಯಂಗ್ಯ ಮತ್ತು ಹಾಸ್ಯ ಭರಿತ ಚಿತ್ರಕಲೆಗಳನ್ನೆಲ್ಲಾ ಕ್ಯಾರಿಕೇಚರ್ ಎಂದೇ ಗುರುತಿಸಲಾಗುತ್ತಿತ್ತು. ಆದರೆ ಒಬ್ಬ ವ್ಯಕ್ತಿಯನ್ನು ಕುರಿತು ವ್ಯಂಗ್ಯಮಾಡಿ ಬಿಡಿಸಿದ ಚಿತ್ರಗಳನ್ನು ಮಾತ್ರ ಇಂದು ಕ್ಯಾರಿಕೇಚರ್ ಎನ್ನಲಾಗುತ್ತದೆ. ಈ ಮುಖ್ಯ ವಿಧಗಳಲ್ಲದೇ ಕಾರ್ಟೂನ್ ಎನ್ನುವ ಶಬ್ದವನ್ನು ಟಿ.ವಿ., ಸಿನಿಮಾ ಅನಿಮೇಷನ್, ಜೋಕ್ಸ್, ಗ್ರಾಫಿಕ್ ಪುಸ್ತಕ, ಪತ್ರಿಕೆ, ಜಾಹೀರಾತು, ಪುಟ್ಟ ಆಕೃತಿಗಳಿಗೆ ಕೂಡ ಅನ್ವಯಿಸಲಾಗುತ್ತದೆ.

* * *

೦೭. ಕಲಾಕೋಶ ; ಪುಟ ಸಂಖ್ಯೆ-೯೫

## ರಾಜಕೀಯ ವ್ಯಂಗ್ಯ ಚಿತ್ರಗಳು




ಚಿತ್ರ ೧




ಚಿತ್ರ ೨




ಚಿತ್ರ ೩




ಚಿತ್ರ ೪



## ರಾಜಕೀಯ ವ್ಯಂಗ್ಯ ಚಿತ್ರಗಳು




ಚಿತ್ರ ೫




ಚಿತ್ರ ೬




ಚಿತ್ರ ೭




ಚಿತ್ರ ೮



## ರಾಜಕೀಯ ವ್ಯಂಗ್ಯ ಚಿತ್ರಗಳು




ಚಿತ್ರ ೯




ಚಿತ್ರ ೧೦




ಚಿತ್ರ ೧೧




ಚಿತ್ರ ೧೨



## ಸಾಮಾಜಿಕ ವ್ಯಂಗ್ಯ ಚಿತ್ರಗಳು




ಚಿತ್ರ ೧




ಚಿತ್ರ ೨




ಚಿತ್ರ ೩




ಚಿತ್ರ ೪



## ಸಾಮಾಜಿಕ ವ್ಯಂಗ್ಯ ಚಿತ್ರಗಳು




ಚಿತ್ರ ೫




ಚಿತ್ರ ೬




ಚಿತ್ರ ೭




ಚಿತ್ರ ೮



## ಸಾಮಾಜಿಕ ವ್ಯಂಗ್ಯ ಚಿತ್ರಗಳು




ಮುಂದೊಂದು ದಿನ ನೀರಿಗೂ ಬೆಲೆ ಬರುತ್ತೆ
ಅನ್ನೋ ನಿಮ್ಮ ಮಾತು ನಿಜವೇನೋ ಅನ್ನಿಸ್ತಾ ಇದೆ,
ಈ ಹಾಲಿನ ವ್ಯಾಪಾರ ಪ್ರಾರಂಭಿಸಿದಾಗಿನಿಂದ !

ಚಿತ್ರ ೯




ನೆನ್ನೆ ಸಾಂಬಾರಲ್ಲಿ ಕೂದಲು ಸಿಕ್ತು
ಅಂದ್ಯಲ್ಲ .. ಅದಕ್ಕೇ !

ಚಿತ್ರ ೧೦




ನಾನು ಹೇಳಿರ್ಲಿಲ್ವಾ ... ಈ ಸರ್ಕಾರ ನಮ್ಮ
ದುಡ್ಡಿನಿಂದ್ಲೇ ನಡೀತಿದೆ ಅಂತ .. !

ಚಿತ್ರ ೧೧




ಈ ಸುದ್ದಿ ನೋಡಿ ಗಾಬರಿಯಿಂದ
ಬಂದೆ, ಸದ್ಯ ಈಗ ಸಮಾಧಾನವಾಯಿತು.

ಚಿತ್ರ ೧೨





## ಹಾಸ್ಯ ಪ್ರಧಾನ ವ್ಯಂಗ್ಯ ಚಿತ್ರಗಳು







ಚಿತ್ರ ೧



ಚಿತ್ರ ೨




ಚಿತ್ರ ೩





ಚಿತ್ರ ೪



## ಹಾಸ್ಯ ಪ್ರಧಾನ ವ್ಯಂಗ್ಯ ಚಿತ್ರಗಳು




ಚಿತ್ರ ೫



ಚಿತ್ರ ೬




ಚಿತ್ರ ೭




ಚಿತ್ರ ೮



## ಹಾಸ್ಯ ಪ್ರಧಾನ ವ್ಯಂಗ್ಯ ಚಿತ್ರಗಳು




ಚಿತ್ರ ೯




ಚಿತ್ರ ೧೦




ಚಿತ್ರ ೧೧




ಚಿತ್ರ ೧೨



## ಕಾರ್ಟೂನ್ ಆಧಾರಿತ ಉತ್ಪನ್ನಗಳು
























ಜಗತ್ತು ಸೌಂದರ್ಯಮಯ ಪ್ರಕೃತಿಯಲ್ಲಿ ಕಾಣದ ಬಣ್ಣವಿಲ್ಲ, ನೋಡಲಾಗದ ಆಕೃತಿಯಿಲ್ಲ. ಸೃಷ್ಟಿಯೊಡಮಾಡಿ ಬಂದ ನಾದದ ವೈವಿಧ್ಯತೆ ಅನಂತ. ಮಾನವನ ಮನೋರಾಜ್ಯದ ಬೆಳವಣಿಗೆ ಪ್ರಕೃತಿಯಿಂದಲೆ! ಪ್ರಕೃತಿ ನಿಯಮ ಬೆಳಕು-ಕತ್ತಲೆ, ಸುಖ-ದುಃಖ, ಸುರೂಪು-ಕುರೂಪು. ಹೀಗೆ ದ್ವಂದ್ವಮಯ, ಆದರೂ ನಮಗೆ ಎಲ್ಲೆಲ್ಲಿಯೂ ಕಂಡುಬರುವುದು ಸೃಷ್ಟಿಯ ಸೌಂದರ್ಯವಾಗಿ ಮಾನವನಿಗೆ ಸೌಂದರ್ಯಾಭಿರುಚಿ ನಿಸರ್ಗದತ್ತ ಗುಣ. ಆದುದರಿಂದಲೇ ಅವನು ಸುಂದರ ದೃಶ್ಯಗಳನ್ನು ನೋಡಲು, ಸುಶ್ರಾವ್ಯ ನಾದವನ್ನಾಲಿಸಲು ಆಶಿಸುವನು.[೧]

ಒಂದೇ ಸನ್ನಿವೇಶದಲ್ಲಿ ಒಂದೇ ಬಗೆಯ ವಿಷಯ ಸಂಗ್ರಹಣೆಗೈದರೂ, ಎಲ್ಲರ ಅಭಿರುಚಿಯೂ ಒಂದೇ ಬಗೆಯಲ್ಲಿರುವುದು ಅಸಂಭವ, ಅವರವರ ಮನೋಧರ್ಮಕ್ಕನುಗುಣವಾಗಿ ಈ ಅಭಿರುಚಿ ಒಬ್ಬೊಬ್ಬರಲ್ಲಿ ಒಂದೊಂದು ಬಗೆಯಲ್ಲಿ ವಿಶೇಷ ರೀತಿ ವ್ಯಕ್ತವಾಗುವುದು. ಕೆಲವರಿಗೆ ಮನವೊಲಿದ ದೃಶ್ಯಗಳನ್ನು ಕೃತಿರೂಪಕ್ಕೆ ತರುವ ಹಂಬಲ; ಓರ್ವ ಕವಿತಾರಚನೆಯಲ್ಲಿ ಮನಮಾಡಿದರೆ, ಮತ್ತೋರ್ವ ಚಿತ್ರರಚನೆಯಲ್ಲಿ ಅಥವಾ ಮೂರ್ತಿ ನಿರ್ಮಾಣದಲ್ಲಿ ಅವರ ಆಸಕ್ತಿ ತೋರುವನು. ಕವಿಯು, ಕಾವ್ಯರಚನೆಯಲ್ಲಿ ತೊಡಗಿದರೆ, ಗಾಯಕನು ಭಾವಪೂರಿತ ಗಾನದಲ್ಲಿ ಮಗ್ನವಾಗುವನು. ಅಂತೆ ರೂವಾರಿ ಶಿಲಾಶಿಲ್ಪದಲ್ಲಿ ಸ್ಥಪತಿ ಎರಕ ಹೊಯ್ಯುವುದರಲ್ಲಿ, ನೇಕಾರ ನೇಯಿಗೆಯಲ್ಲಿ ತನ್ನ ಪ್ರತಿಭೆಯನ್ನು ಪ್ರದರ್ಶಿಸುವನು. ಈ ಬಗೆಯ ಕೃತಿಗಳಲ್ಲಿ ಕರ್ತುವಿನ ಅನುಭವ, ಅಭ್ಯಾಸ, ಚತುರತೆ, ಕಾರ್ಯಕ್ಕೊದಗಿದ ಸಲಕರಣೆ ಮತ್ತು ಕೃತಿಕಾರನು ತೋರುವ ಶ್ರದ್ಧಾಭಕ್ತಿ ಇವುಗಳೆಲ್ಲ ಸಂಕೀರ್ಣಗೊಂಡಿರುವವು ಕೃತಿಯ ಅಂತಸ್ತು, ಇವುಗಳ ಪರಿಶ್ರಮ ಮತ್ತು ಪ್ರೌಢಿಮೆಗನುಗುಣವಾಗಿರುವುದು. ಪೂರ್ವಸಂಸ್ಕಾರ ಪಡೆದ ಪ್ರತಿಭಾ ಸಂಪನ್ನರ ವಿಷಯ ಬೇರೆ. ಅವರು ಕಂಡು ಕೇಳಿ, ಅರಿತ ಅಂಶಗಳು ಕೇವಲ ಸಾಧನಗಳು ಅಂತಹ ಪ್ರತಿಭಾವಂತರು ಸಹಜತೆಯ ಎಲ್ಲೆಮೀರಿ, ಕಲ್ಪನಾಸಾಮರ್ಥ್ಯದಿಂದ ರೂಪುಗೊಂಡ ಭಾವನಾ ಪ್ರಪಂಚದಲ್ಲಿ ಓಲಾಡುವರು. ಆನಂದದಲ್ಲಿ ಭಾಸವಾದ ಭವ್ಯ ರೂಪವನ್ನು ತಮ್ಮ ಕೃತಿಯಲ್ಲಿ ರೂಪಿಸುವರು ಅದು ನಿಜಕ್ಕೂ ಅಮರ ಕೃತಿಯಾಗಿ ಪರಿಣಮಿಸುವುದು. ಎಲ್ಲರಿಂದ ಈ ಬಗೆಯ ಅಸದೃಶ್ಯ ಕೃತಿ ನಿರ್ಮಾಣ ಸಾಧ್ಯವಾಗದಿರಬಹುದು. ಆದರೆ ಅವರವರ ಅನುಭವಕ್ಕೆ ತಕ್ಕಂತೆ ಬುದ್ಧಿಸಾಮರ್ಥ್ಯಕ್ಕೆ ತಕ್ಕಂತೆ, ಅಭಿರುಚಿಗನುಗುಣವಾಗಿ ತಮಗೆ ತೋರಿದ ಭಾವನೆಗೆ ಕೃತಿಯನ್ನು ಕೊಡುತ್ತಾರೆ. ಅಮರಕೃತಿಯೊಂದಿಗೆ ಅದನ್ನು ಹೋಲಿಸಿ ಅಲ್ಲಗಳೆಯುವುದು ತುಂಬ ತಪ್ಪಾದಿತು. ಅಭಿಮಾನದಿಂದ ಕಲೆಯನ್ನು ನೋಡುವುದಾದರೆ ಕೃತಿಯಲ್ಲಿನ

ಅಡಿಟಿಪ್ಪಣಿಗಳು

೦೧. ವಾಸುದೇವ ಕಾಣೆಮಾರ್ : ಕಲಾ ಪ್ರಕಾರಗಳು; ಪುಟ ಸಂಖ್ಯೆ-೧೨೦

ವೈಶಿಷ್ಟ್ಯವೂ ಸೊಗಸೂ ತೋರಿಬರುವುದು. ಹೀಗೆಯೇ ಜನ ಸಾಮಾನ್ಯರಲ್ಲಿ ಕೃತಿನಿರ್ಮಾಣ ಶಕ್ತಿಯೂ ಉತ್ತಮ ಕೃತಿಯನ್ನು ನೋಡಿ ಮೆಚ್ಚುವ ಕಲಾಭಿರುಚಿಯೂ ಬೆಳೆಯಬೇಕು. ಕಲಾವಿದರ ಸಂಖ್ಯೆ ಬೆಳೆದಂತೆ ಕಲಾಭಿಮಾನಿಗಳ ಬಳಗವೂ ಅತಿ ಅತ್ಯಗತ್ಯ.

ಒಂದು ಕಲ್ಲು ನೀರಲ್ಲಿ ಬಿದ್ದಾಗ ಅಲೆಗಳು ಏಳಲು ಪ್ರಾರಂಭವಾಗುತ್ತವೆ. ಒಂದು ಅಲೆಯಿಂದ ಮತ್ತೊಂದು ಅಲೆ ಹೀಗೆ ಹರಡುತ್ತಾ ಹರಡುತ್ತಾ ಅಪರಿಮಿತ ಅಲೆಗಳಾಗುತ್ತವೆ. ಹಾಗೇ ಒಂದು ವಿಚಾರ ಹರಡಿ ಅದರ ಸುತ್ತ-ಮುತ್ತ ಸಾವಿರಾರು ವಿಚಾರಗಳ ಅಲೆಗಳು ಏಳುವುದು. ಒಳ್ಳೇತನ ಅಲೆಗಳಂತೆ ಹರಡುತ್ತದೆ. ಒಳ್ಳೆ ವಿಚಾರ, ಒಳ್ಳೆಯ ವ್ಯಕ್ತಿತ್ವ, ಒಳ್ಳೆಯ ಬೆಳಕಾಗಿ ಬೆಳಗುತ್ತಾನೆ. ಅದೇ ರೀತಿ ಕತ್ತಲಲ್ಲಿ ಮಿಂಚು ಬೆಳಗಿದಂತೆ ಒಳ್ಳೆ ಕಲೆ ಕಾಣಿಸಿಕೊಳ್ಳುತ್ತದೆ. ಬೆಳಕಿನ ಅನುಭವ ಕುರುಡನಿಗೆ ಆಗದು ಕಣ್ಣಿದ್ದವರೆಲ್ಲಾ ಒಳ್ಳೆ ಕಲೆಯನ್ನು ಗುರ್ತಿಸಬಲ್ಲರು. ಬೆಳಕಿಗೆ ಕಣ್ಣು ತೆರೆಸುವ ಗುಣ ಇರುವುದರಿಂದ ಒಳ್ಳೆ ಕಲೆ ಬೆಳಕಿಗೆ ಒಂದೇ ಬರುತ್ತದೆ. ಅಷ್ಟೇ ಅಲ್ಲ ಅಥ ಒಳ್ಳೆ ಕಲೆ ಜನರಲ್ಲಿ ಅಲೆಗಳಂತೆ ಹರಡುತ್ತದೆ. ಚರ್ಚಿಸಲ್ಪಡುತ್ತದೆ. ಆನಂದಿಸಲ್ಪಡುತ್ತದೆ. ಅಂತಹ ಕಲೆಗಳಲ್ಲಿ ವ್ಯಂಗ್ಯಚಿತ್ರಕಲೆಯು ಒಂದಾಗಿದೆ.[೨]

ಬಹುಶಃ ಮನುಷ್ಯ ತನ್ನ ನೆರಳನ್ನು ಮೊದಲ ಬಾರಿಗೆ ಗುರ್ತಿಸಿ ಆಶ್ಚರ್ಯಗೊಂಡು ಆಗಲೇ ಹುಟ್ಟಿರಬೇಕು. ಈ ವ್ಯಂಗ್ಯ ನೆತ್ತಿಯ ಮೇಲಿನ ಸೂರ್ಯನ ಚಲನೆಗೆ ಅನುಗುಣವಾಗಿ ಮನುಷ್ಯನ ಹಾಗೂ ಇತರ ವಸ್ತುಗಳ ಮೇಲೆ ಬಿದ್ದಾಗ ಉದ್ದವಾಗುವ ಗಿಡವಾಗುವ ನೆರಳ ಯಾರೋ ಜಾದೂಮಾಡಿದ ರೀತಿಯಲ್ಲಿ ನೀರಿನಲ್ಲಿ ಕನ್ನಡಿಯಲ್ಲಿ ಕಾಣುವ ನಮ್ಮ ಪ್ರತಿಬಿಂಬ ಇವುಗಳನ್ನೆಲ್ಲ ಮನುಷ್ಯ ಕಂಡನಲ್ಲ. ಆಗಲೇ ಮನುಷ್ಯನ ಕಲ್ಪನೆಗೆ ಹುಟ್ಟಿಕೊಂಡಿರಬೇಕು. ಈ ವ್ಯಂಗ್ಯಚಿತ್ರಕಲೆ ಆದರೆ ಈ ನೆರಳುಗಳಿಗೆ ಭ್ರಮೆಹುಟ್ಟಿಸುವಂಥ ಬಿಂಬಗಳಿಗೆ ಆಗಿನ ಕಾಲಕ್ಕೆ ವ್ಯಂಗ್ಯಚಿತ್ರ (ಕಾರ್ಟೂನ್) ಎನ್ನುವ ಹೆಸರಿರಲಿಲ್ಲ. ನಮ್ಮ ಆದಿಮಾನವನ ಕಾಲದ ಪ್ರಾಗೈತಿಹಾಸಿಕ ಚಿತ್ರಗಳನ್ನು ನೋಡಿದರು ಸಹ ಅವು ಕೆಲವು ವ್ಯಂಗ್ಯಚಿತ್ರಗಳಾಗಿಯೇ ಕಾಣುತ್ತವೆ. ಕೆಲವು ವ್ಯಕ್ತಿ ಚಿತ್ರಗಳು ಪ್ರಾಣಿ, ಪಕ್ಷಿ ಹಾಗೂ ಕೆಲವು ವಸ್ತುಗಳ ಆಕೃತಿಗಳು ವ್ಯಂಗ್ಯಚಿತ್ರಗಳನ್ನು ಹೋಲುತ್ತವೆ. ಆದರೆ ವ್ಯಂಗ್ಯಚಿತ್ರಗಳ ಬಹುತೇಕ ಲಕ್ಷಣಗಳು ಆ ನೆರಳು ಬಿಂಬಗಳಿಗಿದ್ದವು. ನಮ್ಮ ಸುತ್ತಮುತ್ತಲಿನ ವಸ್ತುಗಳು ಹಾಗೂ ಜೀವಿಸುವ ಪ್ರಕೃತಿಯಲ್ಲಿ ನಮ್ಮ ದೈನಿಕದಲ್ಲಿ ವ್ಯಂಗ್ಯ ಚಿತ್ರಗಳಿವೆ.

ನಮ್ಮ ಆಧುನಿಕ ಬದುಕಿನಲ್ಲಿ ಇಣುಕಿನೋಡಿದಾಗ ಅಲ್ಲು ವ್ಯಂಗ್ಯಚಿತ್ರದ ಅಸ್ತಿತ್ವ ಪರೋಕ್ಷವಾಗಿ ಕಾಣಿಸುತ್ತದೆ. ಗ್ರಾಮೀಣದ ಬೆಳೆದುನಿಂತ ಹೊಲಗಳಲ್ಲಿನ ಬೆದರು ಗೊಂಬೆಗಳನ್ನು ಪಕ್ಷಿಗಳನ್ನು ಎದರಿಸಲು ಅವುಗಳನ್ನು ನಿಲ್ಲಿಸಿರುತ್ತಾರೆ. ಇವು ಒಂದು ತರಹ ವ್ಯಂಗ್ಯಚಿತ್ರದ ರೂಪದಲ್ಲಿ ನಾವು ನೋಡಬಹುದಾಗಿದೆ. ಹೊಸ ಮನೆಗೆ ದೃಷ್ಟಿಯಾಗದಿರಲು, ಕೆಲವು ವಿಶಿಷ್ಟವಾದ ದೃಷ್ಟಿಬೊಂಬೆಗಳಾದ ಭೂತದ ರೀತಿಯಲ್ಲಿ ವಿಚಿತ್ರದ ರೀತಿಯ ಬೊಂಬೆಗಳನ್ನು ಕಟ್ಟಿರುತ್ತಾರೆ. ಈ ಭೂತದ ಚಿತ್ರಗಳು ಸಹ ವ್ಯಂಗ್ಯದ ಚಿತ್ರಗಳೆ. ನಮ್ಮ ಮನೆಗಳಲ್ಲಿ ಚಿಕ್ಕಮಕ್ಕಳು ಆಟಿಕೆಗಳ ಬೊಂಬೆಗಳಲ್ಲಿ ಕೂಡ ವ್ಯಂಗ್ಯ ಚಿತ್ರಗಳನ್ನು ಕಾಣಬಹುದಾಗಿದೆ.

---

೦೨. ವಾಸುದೇವ ಕಾಣೆಮಾರ್ : ಕಲಾ ಪ್ರಕಾರಗಳು ; ಪುಟ ಸಂಖ್ಯೆ-೧೦೧

ವ್ಯಂಗ್ಯ ಚಿತ್ರಕಲೆಯ ಮೇಲಾದ ಪ್ರಭಾವ, ಪ್ರೇರಣೆ, ತಂತ್ರ, ಶೈಲಿ

ಭಾರತೀಯರ ಪಾಲಿಗಂತೂ ಕಾರ್ಟೂನ್ ಸಂಸ್ಕೃತಿದತ್ತವಾದುದು. ನಮ್ಮ ಪುರಾಣ ಪುರುಷರ ಚಿತ್ರಗಳಲ್ಲೇ ವ್ಯಂಗ್ಯಚಿತ್ರದ ಬೇರುಗಳಿವೆ. ಈ ನಿಟ್ಟಿನಲ್ಲಿ ಗಣೇಶ ಅಧಿನಾಯಕ ಆನೆಯ ಮುಖ, ಸೊಂಡಿಲು, ಆಗಲೋ ಈಗಲೋ ಒಡೆಯುವಂತೆ ಕಾಣುವ ಹೊಟ್ಟೆ, ಅದಕ್ಕೆ ಸುತ್ತಿದ ಹಾವು ಬೆಲ್ಟ್, ಮೂಷಿಕ ವಾಹನ ಗಣೇಶ ನಂಬರ್ ಒನ್ ನಗೆದೇವತೆ, ರಾಮಾಯಣ ತಿರುವಿಹಾಕಿ, ಅಲ್ಲಿನ ಕಬಂಧ ಎನ್ನುವ ರಾಕ್ಷಸನ ಬಾಹುಗಳು ಯೋಜನ ಉದ್ದವಿದ್ದವಂತೆ. ಯೋಜನ ಗಾತ್ರದ ವಿಸ್ತಾರವನ್ನು ತನ್ನ ಕೈಗಳಿಂದ ಜಾಲಿಸುತ್ತಿದ್ದ ರಾಕ್ಷಸನೂ ಒಂದು ಕಾರ್ಟೂನ್! ರಾವಣ ಹತ್ತು ತಲೆ, ಕಾರ್ತವೀರ್ಯನ ಸಾವಿರ ಕೈಗಳು, ಬ್ರಹ್ಮನ, ಹಣೆಗಣ್ಣು ಶಿವ, ಮೈಯೆಲ್ಲ ಕಣ್ಣುಗಳುಳ್ಳ ಇಂದ್ರ, ಕಂಬ ಸೀಳಿ ಬಂದ ಸಿಂಹಮುಖದ ದೇವರು ನರಸಿಂಹ, ವಿಷ್ಣುವಿನ ಹೊಕ್ಕಳಲ್ಲಿ ಬ್ರಹ್ಮ ಇವೆಲ್ಲ ಪರಿಕಲ್ಪನೆಗಳ ಹಿಂದಿರುವುದು ವ್ಯಂಗ್ಯಚಿತ್ರ ಥೀಯರಿಯೇ ಅಲ್ಲವೆ ಮೂರು ಲೋಕಗಳನ್ನು ಎಳೆದ ಮೂರಡಿ ಉದ್ದದ ವಾಮನಮೂರ್ತಿ ಸಂಕೇತಿಸುವುದು ಒಂದು ಅದ್ಭುತ ಕಲ್ಪನೆಯ ಕಾರ್ಟೂನ್‌ನ್ನೆ ನಮ್ಮ ಪೂರ್ವಜರು ವ್ಯಂಗ್ಯಚಿತ್ರ ಪ್ರಜ್ಞೆ ಹೊಂದಿದ್ದರೆನ್ನುವುದನ್ನು ಗಮನಿಸಬಹುದಾಗಿದೆ.

ತಮಗೆ ತಿಳಿದ ರೀತಿಯಲ್ಲಿ ಗೋಡೆ, ನೆಲ, ಪುಸ್ತಕ ಹೀಗೆ ಕೆಲವು ಕಡೆಗೀಚುವ ತೊದಲು ಗೆರೆಗಳು ಒಂದು ರೀತಿಯ ವ್ಯಂಗ್ಯಚಿತ್ರಗಳನ್ನು ಅವು ರಚಿಸಿರುತ್ತವೆ. ಚಿಕ್ಕ ಮಕ್ಕಳ ಕಲ್ಪನೆಯಲ್ಲಿ ಮನುಷ್ಯರಾಕೃತಿ, ಪ್ರಾಣಿ, ಪಕ್ಷಿ ಅವುಗಳ ಸುತ್ತ-ಮುತ್ತ ಕಾಣಸಿಗುವ ವಸ್ತುಗಳನ್ನು ತಮ್ಮ ಕಾಲ್ಪನಿಕ ರೂಪದಲ್ಲಿ ಹಲವು ಬಗೆ ಬಗೆಯ ವ್ಯಂಗ್ಯಚಿತ್ರಗಳನ್ನು ರಚಿಸುತ್ತವೆ. ಹಾಗಾಗಿ ಈ ಕಾರ್ಟೂನ್ (ವ್ಯಂಗ್ಯಚಿತ್ರ) ಎನ್ನುವುದು ಸೀಮಿತ ಅರ್ಥವುಳ್ಳದ್ದಲ್ಲ. ಇದು ವಿಶ್ವವ್ಯಾಪ್ತಿ, ವಿಶ್ವರೂಪಿ. ಇದು ನಮ್ಮೊಳಗೂ ಇದೆ, ಹೊರಗೂ ಇದೆ ಎನ್ನುವ ಮಾತು ನೂರಕ್ಕೆ ನೂರರಷ್ಟು ಸತ್ಯವಾಗಿದೆ.

**ಪ್ರಭಾವ**

ಮೊದಲಿನಿಂದಲೂ ನಮ್ಮ ಪುರಾಣ, ಇತಿಹಾಸ ಕಥೆಗಳಲ್ಲಿ 'ವಿದೂಷಕರ' ಮೂಲಕ ಹಾಸ್ಯರಸ ಪ್ರಚಲಿತವಾಗಿತ್ತು. ವಿದೂಷಕರು ರಾಜರನ್ನು ಹೊಗಳುತ್ತಲೆ ಕಾಲೆಳೆದು ತಪ್ಪುಗಳನ್ನು ನಯವಾಗಿ ಹೇಳಿ, ನಗಿಸಿ ಆತನಲ್ಲಿ ಅರಿವು ಮೂಡಿಸಿ, ಸಭಾಸದಸ್ಯರನ್ನು ನಗೆಗಡಲಲ್ಲಿ ತೇಲಿಸುತ್ತಿದ್ದರು. ಆದರೆ ಇಂದು, ಇಂದಿನ ವ್ಯಂಗ್ಯಚಿತ್ರಗಳಲ್ಲಿ ಬರುವ ಸಾಮಾನ್ಯ ಮನುಷ್ಯ ಆ ವಿದೂಷಕರ ಆಧುನಿಕ ರೂಪ, ಪತ್ರಿಕೆ ಪುಟಗಳ ಮೇಲೆ ಕಣ್ಣಾಡಿಸುವಾಗ ತಟ್ಟನೆ ಮನುಷ್ಯನನ್ನು ಆಕರ್ಷಿಸುವ ವ್ಯಂಗ್ಯಚಿತ್ರಗಳು, ಓದುಗನನ್ನು ನಗೆ ಲೋಕಕ್ಕೊಯ್ದು, ಕಚಗುಳಿಯಿಟ್ಟು ಸುದ್ದಿಯ ಹಿಂದಿರುವ ಸ್ವಾರಸ್ಯದೆಡೆಗೆ ಗಮನ ಸೆಳೆದು ಪತ್ರಿಕೋದ್ಯಮದ ಅವಿಭಾಜ್ಯ ಅಂಗವಾಗಿ ಬೆಳೆಯುತ್ತಿದೆ.

ನಮ್ಮ ವ್ಯಂಗ್ಯಚಿತ್ರಗಳು ಹತ್ತಾರು ಪುಟಗಳ ಲೇಖನಗಳು, ಸಂಪಾದಕೀಯಗಳು ಸಾರುವ ಸಂದೇಶಗಳನ್ನು ಸಮರ್ಪಕವಾಗಿ ಚಿಕ್ಕದೊಂದು ವ್ಯಂಗ್ಯಚಿತ್ರ ಓದುಗನಿಗೆ ಮುಟ್ಟಿಸುತ್ತದೆ. ಕೆಲವೊಮ್ಮೆ ಅನಕ್ಷರಸ್ಥರೂ ವ್ಯಂಗ್ಯ ಚಿತ್ರವನ್ನು ಗಮನಿಸಿ ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ರೀತಿಯ ಆಗುಹೋಗುಗಳನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದಾಗಿದೆ.

## ವ್ಯಂಗ್ಯ ಚಿತ್ರಕಲೆಯ ಮೇಲಾದ ಪ್ರಭಾವ, ಪ್ರೇರಣೆ, ತಂತ್ರ, ಶೈಲಿ

ವ್ಯಂಗ್ಯಚಿತ್ರ ಕಲೆಯು ಒಂದು ಕ್ರಿಯೇಟಿವ್ ಕೆಲಸವಾಗಿ ಇದನ್ನು ರಚಿಸಲು ಒಬ್ಬ ಪ್ರತಿಭಾವಂತನಾದ ಕಲಾವಿದನಿಗೆ ಮಾತ್ರ ಸಾಧ್ಯವಾಗುತ್ತದೆ. ವ್ಯಂಗ್ಯಚಿತ್ರ ಕಲಾವಿದನಿಗೆ ತನ್ನ ಸುತ್ತಮುತ್ತಲಿನ ವಾತಾವರಣ ಹಾಗೂ ಗಂಭೀರವಾದ ಚಿಂತನೆಗಳಿರುತ್ತವೆ. ಜನರ ಸಂಕಷ್ಟಗಳ ಬಗೆಗೆ ತೀವ್ರವಾದ ಕಳಕಳಿ ಇರುತ್ತದೆ. ಈಗಿನ ರಾಜಕೀಯ ಮುಂದಾಳುಗಳ ಹಾಗೂ ಅಧಿಕಾರಿಗಳ ಸ್ವಾರ್ಥ, ಸಮಯ ಸಾಧಕತೆ, ಅಷಾಢಭೂತಿತನಗಳ ಬಗ್ಗೆ ಆಕ್ರೋಶವಿರುತ್ತದೆ. ಈ ಹಿನ್ನೆಲೆಯಿಂದ ಕಲಾವಿದನು ಪ್ರಭಾವಿತನಾಗಿ ತನ್ನ ಕಲ್ಪನೆಯಲ್ಲಿ ಕೆಲವು ನಡೆಯುವ ಘಟನೆಗಳ ವಿರುದ್ಧವಾಗಿ ಚಿತ್ರಗಳು ಮೂಡುತ್ತವೆ. ವ್ಯಂಗ್ಯಚಿತ್ರಗಳು ಮೇಲು ನೋಟಕ್ಕೆ ಹಾಸ್ಯವಿಡಂಬನೆ ಇದ್ದರೂ ಅವುಗಳ ಉದ್ದೇಶ ನಮ್ಮನ್ನು ನಗಿಸುವುದು ಮಾತ್ರವಲ್ಲ, ನಗುವಿನ ಆಚೆ ಇರುವ ಅಳಲು ಕ್ರೋಧವು ಇರುತ್ತದೆ. ಇಂಥ ವ್ಯಂಗ್ಯ ಚಿತ್ರಗಳು, ಅಯಸ್ಕಾಂತವು ಲೋಹವನ್ನು ಸೆಳೆಯುವಂತೆ ಜನರ ಗಮನವನ್ನು ತಮ್ಮೆಡೆಗೆ ಆಕರ್ಷಿಸುತ್ತವೆ. ಚಿತ್ರದ ಹಿನ್ನೆಲೆಯಲ್ಲಿರುವ ಚಿಂತನೆ, ಕಳಕಳಿ ಎಷ್ಟೆಷ್ಟು ಗಾಢವಾಗಿರುತ್ತದೋ, ಅಷ್ಟಷ್ಟು ಅದರ ಆಕರ್ಷಣೆ ಶಕ್ತಿ ಬಲವತ್ತರವಾಗಿರುತ್ತದೆ. ಇಂತಹ ಚಿಂತನೆಗಳಿಂದ ಪ್ರೇರಿತನಾದ ಕಲಾವಿದನು ಬಹುಕಾಲ ಅವನ ಕ್ಷೇತ್ರದಿಂದ ನಿವೃತ್ತಿ ಹೊಂದಲು ಕೂಡ ಜನಮನದಲ್ಲಿ ನೆಲೆ ನಿಲ್ಲುತ್ತಾನೆ. ನಮ್ಮ ಕರ್ನಾಟಕದ ವ್ಯಂಗ್ಯಚಿತ್ರಗಳು ಹರಿವ ನೀರಿನ ಕಣಗಳಂತೆ ಮಿಂಚಿ ಮಾಯವಾದರೂ ಅವುಗಳ ಪ್ರಭಾವವು ನಿರಂತರವಾಗಿ ಹರಿಯುವ ನದಿಯಂತೆ ಅಖಂಡವಾಗಿರುತ್ತದೆ ಎಂದರೆ ತಪ್ಪಾಗಲಾರದು.

### ಪ್ರೇರಣೆ

ಒಬ್ಬ ಕಲಾವಿದನಿಗೆ ಅನೇಕ ವಿಧದಲ್ಲಿ ಪ್ರೇರಣೆ ದೊರಕುವುದು. ಕೆಲವೊಮ್ಮೆ ಪ್ರತ್ಯಕ್ಷವಾಗಿ, ಕೆಲವೊಮ್ಮೆ ಪರೋಕ್ಷವಾಗಿ ತಾನು ರಚಿಸುವ ಚಿತ್ರಗಳ ಮೆಲೆ ಪ್ರಭಾವದೊಂದಿಗೆ ಕಲಾಕೃತಿಗಳು ರಚನೆಗೊಳ್ಳಲು ಪ್ರೇರಣೆಯಾಗುತ್ತದೆ. ಇಲ್ಲಿ ನಮ್ಮ ವ್ಯಂಗ್ಯ ಚಿತ್ರಕಲಾವಿದರ ಮನಸ್ಸು, ಬುದ್ಧಿಶಕ್ತಿ ಸರ್ವಕಾಲವು ಜಾಗ್ರುತವಾಗಿರಬೇಕಾಗುತ್ತದೆ. ಮೊಟ್ಟ ಮೊದಲು ಕಲಾವಿದನಲ್ಲಿ ವ್ಯಂಗ್ಯಮಾತು, ಅಣಕಿಸುವ ವಿರೋಧವಾಗಿ ಯೋಚನೆಮಾಡುವ ಮುಖವಿರಬೇಕಾಗುತ್ತದೆ. ಅಲ್ಲದೆ ವ್ಯಂಗ್ಯ ಚಿತ್ರಕಲಾವಿದರು ಘಟನೆಗಳು ವಸ್ತು ವಿಷಯಗಳಿಗೆ ವಿರೋಧ ರೀತಿಯಲ್ಲಿ ಯೋಚಿಸುವುದು ಜಾಸ್ತಿ. ನಮ್ಮ ಚಿತ್ರಕಲಾವಿದರಿಗೆ ರಾಜಕೀಯ ಸಾಮಾಜಿಕ ಹಾಗೂ ಧಾರ್ಮಿಕವಾದ ರೀತಿಯಲ್ಲಿ ಚಿತ್ರಗಳನ್ನು ರಚಿಸಿರುತ್ತಾರೆ. ಇವೆಲ್ಲವು ರಚಿಸುವಾಗ ತನ್ನ ಸುತ್ತಲಿನ ಪರಿಸರವನ್ನು ಹಾಗೂ ಪ್ರಸ್ತುತ ವಿದ್ಯಮಾನಗಳನ್ನು ಕ್ಷಣಕ್ಷಣಕ್ಕೂ ಪ್ರತಿಕ್ರಿಯಿಸುತ್ತಿರಬೇಕಾಗುತ್ತದೆ. ಇವೆಲ್ಲವುಗಳಿಂದ ಪ್ರಭಾವಿತನಾದ ಮಾತ್ರಕ್ಕೆ ಅವನಲ್ಲಿ ಕಲ್ಪನಾ ಶಕ್ತಿಯಿಂದ ವ್ಯಂಗ್ಯಚಿತ್ರಗಳು ಪ್ರೇರಣೆಗೊಳ್ಳುತ್ತವೆ.

ನಮ್ಮ ವ್ಯಂಗ್ಯ ಚಿತ್ರಗಳು ಪತ್ರಿಕಾ ಮಾಧ್ಯಮದ ಮೂಲಕವೇ ಪ್ರಕಟವಾಗುತ್ತವೆ. ಪತ್ರಿಕೆಗಳಲ್ಲಿ ಬರುವ ವಿವಿಧ ಘಟನೆಗಳ ವರದಿಗಳು, ವಿಶ್ಲೇಷಣೆಗಳು, ಹೇಳಿಕೆಗಳು ಸ್ಥಿತಿ-ಗತಿಗಳು ಇವುಗಳಿಗೆ ಸಂಬಂಧಿಸಿದಂತಯೇ ವ್ಯಂಗ್ಯ ಚಿತ್ರಗಳು ಪ್ರಕಟವಾಗುತ್ತವೆ. ವ್ಯಂಗ್ಯಚಿತ್ರಕಲಾವಿದನಿಗೆ ತನ್ನ ಸುತ್ತಲಿನ ಪರಿಸರದ ಬಗ್ಗೆ ನಿಕಟವಾದ ಸಂಬಂಧವಿರಬೇಕು. ಅಲ್ಲದೆ ಕ್ಷಣ-ಕ್ಷಣಕ್ಕೂ ನಡೆಯುವ ಗಟನೆ ಬಗ್ಗೆ ಪ್ರಭಾವದಿಂದ ತಾನು ರಚಿಸುವ ಚಿತ್ರಗಳಿಗೆ ಪ್ರೇರಣೆಯನ್ನು ಪಡೆದುಕೊಂಡಾಗ ತನ್ನ ಕಲ್ಪನಾ ಶಕ್ತಿಯಿಂದ ರಚಿಸಿದ ಚಿತ್ರಗಳು ಮೂಡುತ್ತವೆ. ಅಲ್ಲದೆ

ವ್ಯಂಗ್ಯಚಿತ್ರಗಳು ಪ್ರಕಟಗೊಂಡು ವಿಷಯಗಳನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಜನರ ಮನಸ್ಸಿನಲ್ಲಿ ಅಚ್ಚೊತ್ತುವಂತೆ ಮಾಡುವದರಿಂದ ವ್ಯಂಗ್ಯಚಿತ್ರಗಳು ಪೂರಕ ಪತ್ರಿಕೋದ್ಯಮ (Supplemental Journal-ism) ಎನ್ನಬಹುದು. ವರದಿ ವಿಶ್ಲೇಷಣೆ, ಲೇಖನಗಳನ್ನು ಬರೆಯಲು ಬರಹಗಾರರಿಗೆ ತುಂಬ ಚಿಂತನ ಅಗತ್ಯ. ಬರೆಯಲು ಸಮಯವು ತುಂಬ ಬೇಕು. ಆದರೆ ಅದೇ ವಿಷಯವನ್ನು ತನ್ನ ಸುತ್ತಲಿನ ವಿಷಯಗಳ ಪ್ರಭಾವದಿಂದ ವಿಷಯಗಳನ್ನು ಸಾರವಾಗಿ ಪ್ರೇರಣೆಗೊಂಡು ವ್ಯಂಗ್ಯಚಿತ್ರ ಕಲಾವಿದ ಸಂಕ್ಷೇಪವಾಗಿ ಒಂದು ಸಣ್ಣ ಚಿತ್ರದಲ್ಲಿ ಅಡಕಗೊಳಿಸುತ್ತಾನೆ. ಅದೂ ನಾಲ್ಕಾರೂ ರೇಖೆಗಳಲ್ಲಿ ನಾಲ್ಕಾರು ನಿಮಿಷಗಳಲ್ಲಿ ರಚಿಸುತ್ತಾನೆ. ಇದೊಂದು ಪರಮಾಶ್ಚರ್ಯ ಪತ್ರಿಕೋದ್ಯಮವನ್ನು "ಅವಸರದ ಇತಿಹಾಸ" (Histrory in a hurry) ಎಂದರುಂಟು. ವ್ಯಂಗ್ಯಚಿತ್ರ ಪ್ರಕಾರವನ್ನು ಅವಸರದ ಪತ್ರಿಕೋದ್ಯಮ (Jornalism in a hurry) ಎನ್ನಬಹುದು.

ಕಲಾವಿದನ ದೃಷ್ಟಿಯಿಂದ ಪ್ರೇರಣೆಗೊಂಡ ಚಿತ್ರಗಳು ಒಂದು ಸಕ್ರಮವಾದ ಮಾಧ್ಯಮವೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಭವಿಷ್ಯತ್ತಿನ ತಲೆಮಾರುಗಳಿಗೆ ಅವುಗಳಿಂದ ತುಂಬ ಪ್ರಯೋಜನವಿದೆ. ಒಂದು ಕಾಲದ ಸ್ಥಿತಿ-ಗತಿಗಳನ್ನು, ನಡವಳಿಕೆಗಳನ್ನು, ವಿಕೃತಿಗಳನ್ನು, ಚಿಂತನ ಕ್ರಮಗಳನ್ನು ದಾಖಲಿಸುವ ಮೂಲಕ ಇತಿಹಾಸವನ್ನು ಶುದ್ಧಗೋಳಿಸುವ, ಮಿಥ್ಯೆಗಳಿಂದ ಮುಕ್ತಗೊಳಿಸುವ ಅತ್ಯಂತ ಪ್ರಭಾವಿ ಸಾಧನ ವ್ಯಂಗ್ಯ ಚಿತ್ರಪ್ರಕಾರ. ವ್ಯಂಗ್ಯಚಿತ್ರ ಪರಂಪರೆಯು ನಮ್ಮ ಸಂಸ್ಕೃತಿಯು ಅವಿಭಾಜ್ಯ ಅಂಗವಾಗಿದೆ. ವ್ಯಂಗ್ಯ ಚಿತ್ರರಹಿತವಾದ ಪತ್ರಿಕಾ ಮಾಧ್ಯಮವನ್ನು ಇಂದು ಊಹಿಸುವುದು ಕಷ್ಟವಾಗಿದೆ.

### ತಂತ್ರ

ಭಾರತದಲ್ಲಿ ವ್ಯಂಗ್ಯಚಿತ್ರ ಕಲೆಗೆ ನೂರು ವರ್ಷಗಳಾಗುತ್ತಿದೆ. ಕನ್ನಡದಲ್ಲಿ ಸುಮಾರು ಎಪ್ಪತ್ತು ವರ್ಷಗಳ ಹಿಂದೆ ವ್ಯಂಗ್ಯಚಿತ್ರ ರಚನೆಯಾಗಿರಬಹುದು. ಮುದ್ರಣ ಕನ್ನಡಕ್ಕೆ ಬಂದ ಕೂಡಲೇ ಕನ್ನಡ ಪತ್ರಿಕೋದ್ಯಮ ಚಟುವಟಿಕೆಗಳು ಪ್ರಾರಂಭವಾದವು. ಪತ್ರಿಕೋದ್ಯಮದ ಜೊತೆ ಜೊತೆಗೆ ಪೋಟೋಗಳನ್ನು ಪ್ರಕಟಿಸುವ, ರೇಖಾಚಿತ್ರಗಳನ್ನು ಸೇರಿಸುವ ಅಗತ್ಯವೂ ಅನಿವಾರ್ಯವಾಯಿತು. ಕನ್ನಡದಲ್ಲಿ ಇವೆರಡರ ಅನುಕೂಲಗಳು ಇರಲಿಲ್ಲ. ಪೋಟೋ ಬ್ಲಾಕ್ ತಯಾರಿಕಾ ಅನುಕೂಲವಿರಲಿಲ್ಲ. ಸುದ್ದಿ ಮೂಲಗಳಿಂದಲೇ ಕೆಲವೊಮ್ಮೆ ಬ್ಲಾಕ್‌ಗಳೂ ಬಂದು ಬಿಡುತ್ತಿದ್ದವು. ಇಡೀ ಪತ್ರಿಕೆಯಲ್ಲಿ ಒಂದೋ ಎರಡೋ ಚಿತ್ರಗಳಿರುತ್ತಿದ್ದವು. ಆ ಕಾಲದಲ್ಲಿ, ಸೀಸದ ಪ್ಲೇಟ್‌ಗಳ ಮೇಲೆ ಪೋಟೋಗಳನ್ನಿಟ್ಟು ಆಮ್ಲಾದಿಗಳ ಸಹಾಯದಿಂದ ಕೆತ್ತುತ್ತಿದ್ದರು. 'ಬ್ಲಾಕ್ ಮೇಕಿಂಗ್ ಪ್ರಕ್ರಿಯೆಯ' ಪೋಟೋ ಜಿಂಕೇ ಪ್ರೋಸೆಸ್ ಎನ್ನುವುದು ಅನಂತರ ಬಳಕೆಗೆ ಬಂದಿತು. ಮುಂದಿನ ವರ್ಷಗಳು 'ಬ್ಲಾಕ್‌ಗಳೇ ಮುದ್ರಣ ಕಲೆಯ ಪ್ರಮುಖ ಅಂಗವಾಯಿತು. ಅಕ್ಷರಗಳನ್ನು ಕೈಯಲ್ಲಿ ಜೋಡಿಸುವುದು. ಬೇಕಾದ ಕಡೆಗಳಲ್ಲಿ ಬ್ಲಾಕ್ ಇರಿಸಿ ಬಿಗಿಮಾಡುವುದು ಇದಕ್ಕೆ ಪೇಜ್ ಕಟ್ಟುವುದು' ಎನ್ನುತ್ತಿದ್ದರು. ಹಂತ ಹಂತವಾಗಿ ಅಕ್ಷರ 'ಕಾಂಪೋಸಿಂಗ್' ಕೆಲಸ ಹೋಯಿತು. ಸಾಲು ಸಾಲು ಅಕ್ಷರಗಳು ಎರಕದ ಸಹಾಯದಿಂದ ಸಿದ್ಧವಾಗಿ ಪುಟಕಟ್ಟಿ ದಪ್ಪರಬ್ಬರ್ ಹಾಳೆಗಳ ಮೇಲೆ ಅಚ್ಚೊತ್ತಿ ಮುದ್ರಣಕ್ಕೆ ಸಿದ್ಧಪಡಿಸುತ್ತಿದ್ದರು. ಹೀಗೆ ಆಧುನಿಕ ಕಂಪ್ಯೂಟರ್ ಕಾಲದಲ್ಲಿ ಹಳೆಯದೆಲ್ಲವೂ ಇತಿಹಾಸ ಸೇರಿದೆ. ಕೈ ಅಕ್ಷರ ಜೋಡಣೆ ಎರಕದ ಸಾಲುಗಳು,

ಬ್ಲಾಕ್‌ಗಳು ರಬ್ಬರ್ ಹಾಳೆಗಳು ಎಲ್ಲವೂ ಹೊರಟು ಹೋಗಿವೆ. ಎಲ್ಲವೂ ಆಧುನಿಕವಾಗಿದೆ. ಅತಿ ಸುಲಭವಾಗಿದೆ. ಸುಂದರ ವಿನ್ಯಾಸದ ಪತ್ರಿಕೆಗಳು, ಪುಸ್ತಕಗಳು ಮಾರುಕಟ್ಟೆಯಲ್ಲಿ ರಾರಾಜಿಸುತ್ತಿವೆ.

ವ್ಯಂಗ್ಯಚಿತ್ರಗಳ ಬೆಳವಣಿಗೆಯೂ ಇದಕ್ಕೆ ಪೂರಕವಾಗಿ ಆಗಿದೆ. ಮದ್ರಾಸ್‌ಗೆ ಫೋಟೋಗಳನ್ನು ಚಿತ್ರಗಳನ್ನು ಬ್ಲಾಕ್ ತಯಾರಿಕೆಗೆ ಕಳುಹಿಸಿ ತರಿಸಿಬೇಕಾಗಿತ್ತು. ಎಲ್ಲರಿಗೂ ಈ ಖರ್ಚನ್ನು ಭರಿಸಲು ಆಗುತ್ತಿರಲಿಲ್ಲ. ಹೀಗಾಗಿ ಅತ್ಯಗತ್ಯ ಕೆಲವೇ ಚಿತ್ರಗಳು ಪತ್ರಿಕೆಯಲ್ಲಿ ಕಂಡವು. ಐವತ್ತು ಅರವತ್ತನೆಯ ದಶಕದಲ್ಲಿ ಬೆಂಗಳೂರಿನಲ್ಲಿಯೇ ಒಬ್ಬಿಬ್ಬರು 'ಬ್ಲಾಕ್ ತಯಾರಿಕರು' ಅಂಗಡಿ ತೆರೆದರು ಪತ್ರಿಕೆಗಳಲ್ಲಿ ಫೋಟೋಗಳು, ರೇಖಾಚಿತ್ರಗಳು ವ್ಯಂಗ್ಯಚಿತ್ರಗಳು ರಾರಾಜಿಸಲು ಮೊದಲು ಮಾಡಿದವು.

ವ್ಯಂಗ್ಯಚಿತ್ರಗಳ ರಚನೆಯಲ್ಲಿ ಡ್ರಾಯಿಂಗ್ ಪೇಪರ್, ಪೋಸ್ಟರ್ ಕಲರ್, ವಾಟರ್ ಕಲರ್, ಪೆನ್, ಬ್ರಶ್, ಪೆನ್ಸಿಲ್, ಕ್ರಯಾನ್, ಆಯಿಲ್ ಪೇಸ್ಟಲ್, ಬೋಲ್ಡ್ ಮಾರ್ಕರ್ ಪೆನ್ನಿನಿಂದ ಹಾಗೂ ಇಂಡಿಯನ್ ಇಂಕ್‌ಗಳಿಂದ ವ್ಯಂಗ್ಯಚಿತ್ರಗಳನ್ನು ರಚಿಸುತ್ತಾರೆ.

ಈಗ ಪ್ರಸ್ತುತ ದಿನಗಳಲ್ಲಿ ತಂತ್ರಜ್ಞಾನದ ಸಹಾಯದಿಂದ ಅದ್ಭುತ ವ್ಯಂಗ್ಯಚಿತ್ರಗಳನ್ನು ರಚಿಸಲಾಗುತ್ತಿದೆ. ಪೇಪರ್‌ನಲ್ಲಿ ಚಿತ್ರದ ಪ್ರಾಥಮಿಕ ಹಂತದಲ್ಲಿ ಪಾತ್ರಗಳು ಎಲ್ಲೆಲ್ಲಿ ಬರಬೇಕೆಂಬುದನ್ನು ಪೆನ್ಸಿಲ್‌ನಿಂದ ಗುರುತು ಹಾಕಿಕೊಳ್ಳುತ್ತಾರೆ. ನಂತರ ಇಂಡಿಯನ್ ಇಂಕ್ (ಕಪ್ಪು ಬಣ್ಣ) ಉಪಯೋಗಿಸಿ ಬ್ರಶ್‌ನಿಂದ ಹೊರ ರೇಖೆಗಳನ್ನು ರಚಿಸುತ್ತಾರೆ. ಸಂತರ ಈ ರಚನೆಯನ್ನು ಸ್ಕ್ಯಾನರ್ ಉಪಯೋಗಿಸಿ ತಾವು ರಚಿಸಿದ ವ್ಯಂಗ್ಯಚಿತ್ರಗಳನ್ನು ವರ್ಗಾಯಿಸಿ ಅಲ್ಲಿ $C_{s4}$ Adobe Photoshop ನಿಂದ ಬಣ್ಣಗಳ ತುಂಬುವಿಕೆ, ಸಂಭಾಷಣೆಗಳ ವಾಕ್ಯಗಳನ್ನು ಬರೆಯುತ್ತಾರೆ. ನಂತರ ಸಣ್ಣ ಪುಟ್ಟ ಹೊಂದಾಣಿಕೆಯನ್ನು ಮಾಡಿ ರಚನೆಯನ್ನು ಪೂರ್ಣಗೊಳಿಸುತ್ತಾರೆ. ಇದು ಪ್ರಸ್ತುತ ದಿನಗಳಲ್ಲಿ ವ್ಯಂಗ್ಯ ಚಿತ್ರ ರಚನಾ ತಂತ್ರವಾಗಿದೆ. ಕೆಲವೊಮ್ಮೆ ನೈಜ ಚಿತ್ರಗಳನ್ನು ಎಡಿಟ್ (Edit)ಮಾಡಿ ತಮ್ಮ ಪರಿಣಾಮಕಾರಿ ವ್ಯಂಗ್ಯಚಿತ್ರಗಳ ರಚನೆಗೆ ಬಳಸುತ್ತಾರೆ.

**ಶೈಲಿ**

ಚಿತ್ರಕ್ಷೇತ್ರದ ವ್ಯಾಪ್ತಿ ತುಂಬ ವಿಶಾಲವಾದುದು. ಖಾಸಗಿ ಎನ್ನಬಹುದಾದ ಕೌಟುಂಬಿಕ, ಸಾಂಸಾರಿಕವಾದ ವಸ್ತುಗಳಿಂದ ಹಿಡಿದು ಸಾರ್ವಜನಿಕವಾದ ರಾಜಕೀಯ, ಸಾಮಾಜಿಕ ಹಾಗೂ ಅಂತರ್ ರಾಷ್ಟ್ರೀಯ ವ್ಯವಹಾರಗಳವರೆಗೆ ನಮ್ಮ ಕರ್ನಾಟಕ ವ್ಯಂಗ್ಯಚಿತ್ರಗಾರ ಕುಂಚ ವ್ಯಾಪಿಸಿದೆ. ವ್ಯಂಗ್ಯಚಿತ್ರಗಳನ್ನು ಈ ರೀತಿ ಕೆಲವು ಶೈಲಿಗಳನ್ನು ನಾವು ನೋಡಬಹುದಾಗಿದೆ. ೧. ಕ್ಯಾರಿಕೇಚರ್ ಇದನ್ನು ವ್ಯಂಗ್ಯಭಾವ ಚಿತ್ರಗಳನ್ನು ೨. ಸರಣಿ ವ್ಯಂಗ್ಯಚಿತ್ರ ಈ ಚಿತ್ರಗಳು ಒಂದು ಎರಡು ಮೂರು ಸ್ಟೇಪ್‌ಗಳಲ್ಲಿ ರಚಿಸುತ್ತಾರೆ. ೩. ರಾಜಕೀಯ ವ್ಯಂಗ್ಯಚಿತ್ರ ಇದು ಪತ್ರಿಕೆಯ ಮುಖ ಪುಟದಲ್ಲಿ ಪ್ರಸ್ತುತ ಘಟನೆ ಸಂಬಂಧಪಟ್ಟ ರೀತಿಯ ಹೆಚ್ಚು ಚಿತ್ರಗಳನ್ನು ನೋಡಬಹುದಾಗಿದೆ. ೪. ಅಸಗತ ಚಿತ್ರಗಳು, ಇವು ಚಿತ್ರದ ಕೆಳಗೆ ಚಿತ್ರಕ್ಕೆ ಸಂಬಂಧಿಸಿದಂತಹ ಅಡಿ ಬರಹಗಳು ಇರುವುದಿಲ್ಲ. ೫. ಕಾರ್ಟೂನ್ ಇನ್‌ಸ್ಟೃಷನ್ ಈ ಚಿತ್ರಗಳನ್ನು ಬೇರೆ ಲೇಖಕರ ಕಥೆ ಹಾಗೂ ವಿಷಯಗಳಿಗೆ

ಸಂಬಂಧಿಸಿದಂತೆ ಚಿತ್ರಗಳನ್ನು ರಚಿಸಿಕೊಡುವುದಾಗಿದೆ. ಇನ್ನೂ ಅನೇಕ ರೀತಿಯಲ್ಲಿ ತಮ್ಮ ಕಲ್ಪನಾ ಶಕ್ತಿ ಹಲವು ಬೇರೆ ಬೇರೆ ರೀತಿಯ ವ್ಯಂಗ್ಯಚಿತ್ರಗಳನ್ನು ರಚಿಸುತ್ತಾರೆ.

**ಪತ್ರಿಕೆಗಳಲ್ಲಿ ವ್ಯಂಗ್ಯಚಿತ್ರ ನಡೆದು ಬಂದದಾರಿ**

ಪತ್ರಿಕಾ ಬರಹವನ್ನು 'ಅವಸರದ ಸಾಹಿತ್ಯವೆಂದೂ, ವ್ಯಂಗ್ಯಚಿತ್ರಗಳನ್ನು ಅವಸರದ ಹಾಸ್ಯ'ವೆಂದೂ ವ್ಯಂಗ್ಯಚಿತ್ರಗಳನ್ನು 'ಅವರಸರ ಹಾಸ್ಯ'ವೆಂದೂ ಕರೆಯುವುದಿದೆ. ರಾಜಕೀಯ ವ್ಯಂಗ್ಯಚಿತ್ರ ಬರೆಯುವವನಿಗೆ ಸುದ್ದಿಯ ಒತ್ತಡ ಸಮಯದ ಪರಿಮಿತಿಯಲ್ಲಿಯೇ ಸಾಧ್ಯವಾದಷ್ಟು ಒಳ್ಳೆಯ ವ್ಯಂಗ್ಯಚಿತ್ರಗಳನ್ನು ರಚಿಸಬೇಕಾಗುತ್ತದೆ. ಆ ಸುದ್ದಿಗಳು 'ಹಳಸಲಾದ' ನಂತರ ಅವನಿಗೆ ಎಷ್ಟೇ ಒಳ್ಳೆಯ 'ಐಡಿಯಾ' ಹೊಳೆದರೂ ಅದರಿಂದ ಉಪಯೋಗವಿಲ್ಲ.

ಇಂದು ಒಂದು ಪತ್ರಿಕೆಯನ್ನು ಕೈಗೆತ್ತಿಕೊಂಡಾಗ ಓದುಗ ಮೊದಲು ಅದರಲ್ಲಿ ಪ್ರಕಟವಾಗಿರುವ ವ್ಯಂಗ್ಯಚಿತ್ರಗಳನ್ನು ಗಮನಿಸುತ್ತಾನೆ. ಅಂದಿನ ಪ್ರಮುಖ ರಾಜಕೀಯ ಘಟನೆಗೋ ಸಾಮಾಜಿಕ ಘಟನೆಗೋ ವ್ಯಂಗ್ಯ ಚಿತ್ರಕಾರ ವ್ಯಂಗ್ಯ ವಿಡಂಬನೆಯನ್ನು ರೇಖೆಗಳಿಂದ ಚಿತ್ರಿಸಿರುವುದನ್ನು ನೋಡಿ ಅವನ ಮುಖದಲ್ಲಿ ನಗೆ ಅರಳುತ್ತದೆ. ವ್ಯಂಗ್ಯಚಿತ್ರಕಾರನ ಉದ್ದೇಶವೂ ಈಡೇರುತ್ತದೆ. ಓದಗನ ಅಭಿಪ್ರಾಯಕ್ಕೂ ವ್ಯಂಗ್ಯಚಿತ್ರಕಾರನ ಉದ್ದೇಶಕ್ಕೂ ಸರಿಹೊಂದಿದರೆ ಆ ವ್ಯಂಗ್ಯಚಿತ್ರಕ್ಕೆ ಇನ್ನಷ್ಟು ಪ್ರಚಾರ ಸಿಗುತ್ತದೆ.

ಇಂದು ಪತ್ರಿಕೋದ್ಯಮದ ಒಂದು ಭಾಗವಾಗಿಯೇ ಬೆಳೆದಿರುವ ವ್ಯಂಗ್ಯ ಚಿತ್ರಕಲೆ ಯಾವಾಗ ಎಲ್ಲಿ ಪ್ರಾರಂಭವಾಯಿತು ಎಂಬುದರ ಬಗ್ಗೆ ಸ್ಪಷ್ಟವಾದ ಮಾಹಿತಿ ಇಲ್ಲ. ೧೮೬೮ರಷ್ಟು ಹಿಂದೆಯೇ ಯುರೋಪಿನಲ್ಲಿ ವಿಡಂಬನಾ ಚಿತ್ರಗಳು ಪ್ರಕಟವಾಗಿದ್ದರ ಬಗ್ಗೆ ವಿವರಗಳು ದೊರಕುತ್ತವೆ. ಹುಲಿಯೊಂದು ಕೋತಿಯೊಂದನ್ನು ತನ್ನ ಕೈಯಲ್ಲಿ ಎತ್ತಿಹಿಡಿದು "ಹೇಳು ಈ ಕಾಡಿಗೆ ರಾಜ ಯಾರು, ನಾನು ತಾನೆ?" ಎಂದು ಅಬ್ಬರಿಸುವ ವ್ಯಂಗ್ಯಚಿತ್ರವೊಂದು ಆ ಸಮಯದಲ್ಲಿ ಪ್ರಕಟಗೊಂಡಿತ್ತು. ಈ ಚಿತ್ರವು ಅಂದಿನ ರಾಜರ ನಿರಂಕುಶಾಧಿಕಾರವನ್ನು ಟೀಕಿಸುವ ಚಿತ್ರವಾಗಿತ್ತು.

ಜಗತ್ತಿನ ವ್ಯಂಗ್ಯ ಚಿತ್ರಕಾರರಲ್ಲೇ ಅಗ್ರಗಣ್ಯರಾದ ನ್ಯೂಜಿಲೆಂಡಿನ ಡೇವಿಡ್ ಲೋ ಎರಡನೇ ಮಹಾಯುದ್ಧ ಕಾಲದಲ್ಲಿ ಬರೆದ ವ್ಯಂಗ್ಯಚಿತ್ರಗಳು ಹಿಟ್ಲರ್ ಮತ್ತು ಮುಸಲೋನಿಯಂಥವರನ್ನೆ ಕೆರಳಿಸುತ್ತಿದ್ದವು. 'ಹಿಟ್ ಆಂಡ್ ಮುಸ್ಸೋ' ಎಂಬ ಹೆಸರಿನಿಂದ ಅವರು ರಚಿಸುತ್ತಿದ್ದ ವ್ಯಂಗ್ಯಚಿತ್ರ ಸರಣಿಯನ್ನು ಅವುಗಳನ್ನು ಪ್ರಕಟಿಸುತ್ತಿದ್ದ ಪತ್ರಿಕೆಗಳನ್ನು ಈ ಇಬ್ಬರು ಸರ್ವಾಧಿಕಾರಿಗಳು ತಮ್ಮ ತಮ್ಮ ದೇಶಗಳಲ್ಲಿ ಬಹಿಷ್ಕರಿಸಿದ್ದರು. ಇಂಗ್ಲೆಂಡಿನ ಲಾಯ್ಡ್ ಜಾರ್ಜ್ ಸರಕಾರವನ್ನು ಡೆವಿಡ್ ಲೋ ಎರಡು ತಲೆ ಹಾವಿಗೆ ಹೋಲಿಸಿ ಚಿತ್ರ ರಚಿಸಿದ್ದರು. 'ಕರ್ನಲ್ ಬ್ಲಿಂಪ್' ಪಾತ್ರವನ್ನು ಸೃಷ್ಟಿಸಿ ಬ್ರಿಟೀಷ್ ಸೇನೆ, ಅದರ ಸಾಮ್ರಾಜ್ಯಶಾಹಿ ನೀತಿಯನ್ನು ನಿರಂತರವಾಗಿ ಖಂಡಿಸಿ ಒಂದು ರೀತಿಯಲ್ಲಿ ಇಂಗ್ಲೀಷರ ಕೋಪಕ್ಕೆ ತುತ್ತಾಗಿದ್ದರು ಡೇವಿಡ್ ಲೋ.

ಭಾರತದಲ್ಲಿ ನಮ್ಮ ವ್ಯಂಗ್ಯಚಿತ್ರಕಲೆ ಸಮೃದ್ಧವಾಗಿ ಬೆಳೆದು ನಿಂತಿದೆ. ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದ ವ್ಯಂಗ್ಯಚಿತ್ರಕಾರರು ಇಂದು ಭಾರತದಲ್ಲೂ ಇದ್ದಾರೆ ಹಾಗೂ ಇಂದು ಈ ಮಟ್ಟಕ್ಕೆ ನಮ್ಮ ಕರ್ನಾಟಕದ

ವ್ಯಂಗ್ಯಚಿತ್ರಕಾರರು ಸಹ ತಮ್ಮನ್ನು ತಾವು ಬೆಳೆಸಿಕೊಂಡು ವ್ಯಂಗ್ಯಚಿತ್ರಕಲೆಯನ್ನು ಉಳಿಸಿದ್ದಾರೆ. ಆದರೆ ವ್ಯಂಗ್ಯಚಿತ್ರಕಲೆಯನ್ನು ಭಾರತೀಯರಿಗೆ ಬ್ರಿಟೀಷರು ಕೊಡುಗೆಯೆಂದು ಕೆಲವು ಮೂಲಗಳಿಂದ ತಿಳಿದುಬರುತ್ತದೆ.

೧೮೫೦ರಲ್ಲಿ ಡೆಲ್ಲಿ ಸ್ಕೆಚ್ ಬುಕ್ ಮೊದಲು ವ್ಯಂಗ್ಯಚಿತ್ರಗಳನ್ನು ಪ್ರಕಟಿಸಿತು. ಆಗ ಭಾರತದ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಡಾಲ್‌ಹೌಸಿಯನ್ನು ಭಾರತದ ಅಂಚೆ ವ್ಯವಸ್ಥೆಯ ರುವಾರಿಯೆಂಬುದು ಬಿಂಬಿಸುವ ಚಿತ್ರವೊಂದನ್ನು 'ಡೆಲ್ಲಿ ಸ್ಕೆಚ್ ಬುಕ್' ತನ್ನ ಪ್ರಥಮ ಸಂಚಿಕೆಯಲ್ಲಿ ಪ್ರಕಟಿಸಿತ್ತು. ಆದರೆ ಭಾರತೀಯ ಸಂಸ್ಕೃತಿ, ಸ್ವಾತಂತ್ರ್ಯ ಸಂಗ್ರಾಮ ಇಲ್ಲಿನ ನಾಯಕರ ತೇಜೋವಧೆಗೆ ಆ ಪತ್ರಿಕೆಯತ್ನಿಸಿ ಸ್ವಾತಂತ್ರ್ಯ ಚಳವಳಿಗಾರರ ಆಕ್ರೋಶಕ್ಕೆ ತುತ್ತಾಯಿತು. ೧೮೫೭ರಲ್ಲಿ ಚಳವಳಿಗಾರರು ಆ ಪತ್ರಿಕಾ ಕಚೇರಿಗೆ ಬೆಂಕಿ ಹಚ್ಚಿ ಪತ್ರಿಕೆಯನ್ನು ನಿಲ್ಲಿಸಿದರು. ಈ ನಿಯತಕಾಲಿಕವು ಸುಮಾರು ೭ ವರ್ಷಗಳ ಕಾಲ ಪ್ರಕಟವಾಯಿತು. 'ಡೆಲ್ಲಿ ಸ್ಕೆಚ್ ಬುಕ್' ಪತ್ರಿಕೆಯಲ್ಲಿದ್ದ ಹಲವಾರು ವ್ಯಂಗ್ಯಚಿತ್ರಕಾರರು ೧೮೫೯ರಲ್ಲಿ ಪ್ರಾರಂಭವಾದ 'ದಿ ಇಂಡಿಯನ್ ಪಂಚ್' ಪತ್ರಿಕೆಗೆ ಬರೆಯ ತೊಡಗಿದ್ದರು. ಈ ಪತ್ರಿಕೆಯೂ 'ಡೆಲ್ಲಿ ಸ್ಕೇಚ್ ಬುಕ್'ನ ಧೋರಣೆಯನ್ನೆ ಅನುಸರಿಸಿ ಭಾರತೀಯರ ಸ್ವಾತಂತ್ರ್ಯ ಹೋರಾಟವನ್ನೆ ಟೀಕಿಸತೊಡಗಿತು. ಈ ಹೋರಾಟವನ್ನು ಹತ್ತಿಕ್ಕಲಾಗದ ಬ್ರಿಟೀಷ್ ಆಡಳಿತ ವ್ಯವಸ್ಥೆಯನ್ನು ಕಟುವಾಗಿ ಆ ಸಮಯದಲ್ಲೇ ವ್ಯಂಗ್ಯ ಚಿತ್ರಗಳನ್ನು ಪ್ರಕಟಿಸುತ್ತಿದ್ದ ಇನ್ನಷ್ಟು ಪತ್ರಿಕೆಗಳೆಂದರೆ The Spectre, Charlatane, Cawanpore, Charivapp ಮತ್ತು Momus, 1853ರಲ್ಲಿ ಕಲ್ಕತ್ತದಿಂದ ಪ್ರಕಟವಾಗುತ್ತಿದ್ದ, Momusನಲ್ಲಿ ಬರೆಯುತ್ತಿದ್ದ ಲೆಫ್ಟಿನೆಂಟ್ ಬೇಥನ್ ಡೂನಾಲ್ಡ್ ಗ್ರಾಂಟ್ ಹೆಚ್ಚು ಜನಪ್ರಿಯನಾದ ವ್ಯಂಗ್ಯಚಿತ್ರಕಾರನಾಗಿದ್ದ.

ಈ ಪತ್ರಿಕೆಗಳು ಬ್ರಿಟಿಷ್ ಪರ ಧೋರಣೆ ಅನುಸರಿಸಿದರೂ ಭಾರತದಲ್ಲಿ ವ್ಯಂಗ್ಯಚಿತ್ರ ಕಲೆ ಬೇರೂರಲು ನೇರವಾದವು.

೧೮೭೦ರಲ್ಲಿ ಕಲ್ಕತ್ತದಲ್ಲಿ ಪ್ರಕಟವಾಗುತ್ತಿದ್ದ 'ಸುಳಿವ್ ಸಮಾಚಾರ್' ವಾರಪತ್ರಿಕೆ ವ್ಯಕ್ತಿಗಳ ಕ್ಯಾರಿಕೇಚರ್‌ಗಳನ್ನು ಪ್ರಕಟಿಸಲು ಪ್ರಾರಂಭಿಸಿತು. ಎರಡು ವರ್ಷಗಳ ನಂತರ 'ಅಮೃತ ಬಜಾರ್' ಪತ್ರಿಕೆ ಸಂಪಾದಕೀಯ ವ್ಯಂಗ್ಯ ಚಿತ್ರಗಳನ್ನು ಪ್ರಕಟಿಸಲು ಪ್ರಾರಂಭಿಸಿತು. ಕಲ್ಕತ್ತಾದಿಂದಲೇ ಪ್ರಕಟವಾಗುತ್ತಿದ್ದ 'ಇಂಡಿಯನ್ ಶಾರಿವಾರಿ' ಎಂಬ ಪಾಕ್ಷಿಕ, ವ್ಯಂಗ್ಯಚಿತ್ರಕಾರ ಸಮೂಹವನ್ನೇ ಹೊಂದಿ ಬ್ರಿಟೀಷ್ ಪ್ರಭುತ್ವವನ್ನು ತೀವ್ರವಾಗಿ ಟೀಕಿಸುವಷ್ಟು ಪ್ರಭಾವಶಾಲಿಯಾಗಿತ್ತು. ೧೮೭೦ ಸಮಯದಲ್ಲೇ ಹುಟ್ಟಿಕೊಂಡ ಪತ್ರಿಕೆಗಳಲ್ಲಿ ನ್ಯೂ ಗುಜರಾತಿ ಪಂಚ್, ದಿ ನ್ಯೂ ಇಂಡಿಯನ್ ಪಂಚ್, ಬಸಂತರ ಪತ್ರಿಕೆಗಳು ಪ್ರಮುಖವಾದವು. ಲಕ್ನೋದಿಂದ ೧೮೭೭ರಲ್ಲಿ ಪ್ರಕಟಣೆ ಪ್ರಾರಂಭಿಸಿದ ಊರ್ದು ಪಂಚ್ ಮೊಟ್ಟ ಮೊದಲ ವ್ಯಂಗ್ಯಚಿತ್ರ ಪ್ರಕಟಿಸಿದ ಉರ್ದು ಪತ್ರಿಕೆ ಚಂಚಾನಂದ ಮತ್ತು ೧೮೮೭ರಲ್ಲಿ ಕಲ್ಕತ್ತಾದಿಂದ ಪ್ರಾರಂಭವಾದ Hope, The paper of The melions ಪತ್ರಿಕೆಗಳು ವ್ಯಂಗ್ಯಚಿತ್ರ ಕಲೆಯನ್ನು ಮತ್ತಷ್ಟು ಪ್ರೋತ್ಸಾಹಿಸಿದವು.

೧೯೦೯ ಡಿಸೆಂಬರ್ ೫ರಂದು 'ಹಿಂದಿ ಪಂಚ್' ಎಂಬ ಆಂಗ್ಲೋ ಗುಜರಾತ್ ವಾರಪತ್ರಿಕೆ ಗಾಂಧೀಜಿ ಬಗ್ಗೆ ಒಂದು ವ್ಯಂಗ್ಯಚಿತ್ರ ಪ್ರಕಟಿಸಿತ್ತು. ಗಾಂಧೀಜಿಯವರ ಸತ್ಯಾಗ್ರಹ ಫಂಡ್‌ಗೆ ಜೆಮ್ ಶೇಡ್‌ಜಿ ಟಾಟಾರ

ಮೊಮ್ಮಗ ಸರ್ ರತತ್‌ಜೆಮ್ ಶೇಠಾಜಿ ೨೫,೦೦೦ ರೂಗಳನ್ನು ನೀಡಿದ್ದರು. ವ್ಯಂಗ್ಯ ಚಿತ್ರದಲ್ಲಿ ಜೈಲಿನಲ್ಲಿ ಬಂಧಿಯಾಗಿರುವ ಗಾಂಧಿಜಿಗೆ ಕಿಟಕಿಯ ಮೂಲ ೨೫,೦೦೦ರೂ ಗಳು ಎಂದು ಮೇಲೆ ಅಂಟಿಸಲಾಗಿರುವ ಗರಗಸವೊಂದನ್ನು ಶೇಠಾಜಿ ಕೊಡುತ್ತಿದ್ದಾರೆ. ಈ ಗರಗಸದ ಮೂಲಕ ಗಾಂಧೀಜಿ ಬಂಧನವನ್ನು ಕಳಚಿಕೊಂಡು ಹೊರಬರಲಿ ಎಂಬುದೇ ಈ ಚಿತ್ರದ ಅರ್ಥವಾಗಿತ್ತು.

ವ್ಯಂಗ್ಯ ಚಿತ್ರರಚನೆಯಲ್ಲಿ ಕಲಾವಿದರ ಪ್ರವೇಶ ಕಲ್ಕತ್ತಾದ ಶ್ರೇಷ್ಠ ಚಿತ್ರಕಲಾವಿದರೂ ಈ ಸಂದರ್ಭದಲ್ಲಿ ಕೆಲವು ಹೆಸರಾಂತ ಚಿತ್ರಕಾರರು ವ್ಯಂಗ್ಯ ಚಿತ್ರಕಲೆಗೆ ಮಾರು ಹೋಗಿ ತಾವೂ ವ್ಯಂಗ್ಯ ಚಿತ್ರಗಳನ್ನು ಬರೆಯಲು ತೊಡಗಿದರು. ಇಂತಹವರಲ್ಲಿ ಪ್ರಮುಖರಾದವರು ಶ್ರೇಷ್ಠ ಕಲಾವಿದರಾದ ಅವನೀಂದ್ರನಾಥ ಠಾಗೋರ್, ಇವರು ಕೆಲವು ವ್ಯಂಗ್ಯಚಿತ್ರಗಳು ೧೯೨೧ರಲ್ಲಿ 'ಭಾರತೀ'ಯಲ್ಲಿ ಪ್ರಕಟವಾದವು. ಹಾಗೆಯೇ ವ್ಯಂಗ್ಯಚಿತ್ರಕಲೆಗೆ ಮನಸೋತ ಇತರ ಶ್ರೇಷ್ಠ ಕಲಾಕಾರೆಂದರೆ ಗಗನೇಂದ್ರನಾಥ್ ಠಾಗೂರ್ ಮತ್ತು ಆಗ ಜೆ.ಜೆ. ಕಲಾಶಾಲೆಯಲ್ಲಿ ಡೈರೆಕ್ಟರ್ ಆಗಿದ್ದ ರಾವ್ ಬಹದ್ದೂರ್ ಎಂ.ವಿ. ದುರಂಧರ್ ಅಲ್ಲದೆ ಗಗನೇಂದ್ರನಾಥ್ ಠಾಗೋರ್‌ರವರು ೧೯೧೭ರಲ್ಲಿ ಪ್ರಪ್ರಥಮ ವ್ಯಂಗ್ಯಚಿತ್ರ ಸಂಕಲವನ್ನು ಹೊರ ತಂದರು. ಇದರ ಶೀರ್ಷಿಕೆ 'ಬಿರಪ್ ಬಯ್ರಾ' ಪ್ರಸಿದ್ಧ ವಿಜ್ಞಾನಿ ಸರ್.ಜೆ.ಸಿ.ಬೋಸ್ ಇದಕ್ಕೆ ಮುನ್ನುಡಿ ಬರೆದರು. ೧೯೨೦ರ ಹೊತ್ತಿಗೆ ನಾಯಕ ಎಂಬ ಪ್ರಸಿದ್ಧ ದಿನ ಪತ್ರಿಕೆ ಪ್ರಕಟವಾಗುತ್ತಿತ್ತು. ಇದರ ಸಂಪಾದಕ ಪಂಚಕರಿ ಬ್ಯಾನರ್ಜಿ, ಗಗನೇಂದ್ರನಾಥ ಠಾಗೋರ್ ಈ ಪತ್ರಿಕೆಗೆ ವ್ಯಂಗ್ಯಚಿತ್ರಗಳನ್ನು ಬರೆಯುತ್ತಿದ್ದರು. 'ದೈನಿಕ್ ಬಸುಮತಿ' ಎಂಬ ಇನ್ನೊಂದು ಪತ್ರಿಕೆಯೂ ವ್ಯಂಗ್ಯಚಿತ್ರಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿತು. ಇದರಲ್ಲಿ ಪ್ರಕಟವಾದ ಹಲವಾರು ವ್ಯಂಗ್ಯ ಚಿತ್ರಗಳು ಆಗಿನ ನಾಯಕರುಗಳ ಕೆಂಗಣ್ಣಿಗೆ ಗುರಿ ಯಾಗಿದ್ದವು.

ಈ ವ್ಯಂಗ್ಯಚಿತ್ರಗಳು ಗಾಂಧೀಜಿಯವರ ಸಿದ್ಧಾಂತ ಸಂದೇಶಗಳನ್ನು ದೇಶದಾದ್ಯಂತ ಪರಿಣಾಮಕಾರಿಯಾಗಿ ಹರಡಿ, ದೇಶವು ಗಾಂಧೀಜಿಯವರ 'ಅಸಹಕಾರ ಚಳುವಳಿ' ಅಡಿಯಲ್ಲಿ ಒಗ್ಗಟ್ಟಾಗಲು ಸ್ಫೂರ್ತಿ ನೀಡುವುದರಲ್ಲಿ ಪರಿಣಾಮಕಾರಿ ಪಾತ್ರ ವಹಿಸಿದವು.

೧೯೧೨ರಲ್ಲಿ ಎಂ.ಎಸ್. ಶರ್ಮಾ ಎಂಬುವರು 'ಶರ್ಮಾಸ್ ಪೋರ್ಟ್ ಬೋಲಿಯಾ ಆಫ್ ಡ್ರಾಯಿಂಗ್ಸ್' ಎಂಬ ಮಾಸಿಕವನ್ನು ಹೊರತಂದರು. ಶರ್ಮಾರವರು ಸ್ವತಃ ತಾವೇ ಗಾಂಧೀಜಿ, ಬಿಡಿನ್‌ಪಾಲ್, ಲಜಪತ್‌ರಾಯ್, ಮೋತಿಲಾಲ್ ನೆಹರೂ, ಠಾಗೂರ್ ಮುಂತಾದವರ ಕ್ಯಾರಿಕೇಚರ್‌ಗಳನ್ನು ಬರೆದು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದರು.

ಆಧುನಿಕ ಭಾರತದ ವ್ಯಂಗ್ಯಚಿತ್ರ 'ಪಿತಾಮಹ' ಎಂದೇ ಕರೆಯಲ್ಪಡುತ್ತಿದ್ದ ಕೇಶವ ಶಂಕರ್ ಪಿಳ್ಳೈ ೧೯೪೮ರಲ್ಲಿ 'ಶಂಕರ್ಸ್ ವೀಕ್ಲಿ' ಎಂಬ ಸಂಪೂರ್ಣ ವ್ಯಂಗ್ಯಚಿತ್ರಕ್ಕೆ ಮೀಸಲಾದ ಪತ್ರಿಕೆ ಪ್ರಾರಂಭಿಸಿ, ವ್ಯಂಗ್ಯ ಚಿತ್ರಕಾರರ ಹೊಸ ಪೀಳಿಕೆಯೊಂದನ್ನೆ ಸೃಷ್ಟಿಸಿದರು. ಶಂಕರ್ ಚಿತ್ರಿಸುತ್ತಿದ್ದ 'ಬಂಡೇ ಸಾಬ್, ಮೇಯ್ ಸಾಬ್' ಪಾತ್ರಗಳು ಕತ್ತೆಯ ಮುಖವನ್ನು ಮನುಷ್ಯನ ದೇಹವನ್ನು ಹೊಂದಿ ಡೇವಿಡ್ ಲೋನ ಕರ್ನಲ್ ಬ್ಲಿಂಪ್

ಪಾತ್ರದಷ್ಟೇ ಪ್ರಸಿದ್ಧಿ ಪಡೆಯಿತು. ನೆಹರೂರವರಂತೂ ಶಂಕರ್‌ರ ವ್ಯಂಗ್ಯಚಿತ್ರಕ್ಕೆ ಬಹಳ ಇಷ್ಟವಾದ ವ್ಯಕ್ತಿಯಾಗಿದ್ದರು. ೧೫೦೦ರಷ್ಟು ವ್ಯಂಗ್ಯಚಿತ್ರಗಳನ್ನು ನೆಹರು ಬಗ್ಗೆಯೇ ಶಂಕರ್ ಬರೆದಿದ್ದಾರೆ.

'ಕೊರವಂಜಿ' ಪತ್ರಿಕೆಯಲ್ಲಿ ಬರೆಯಲು ಪ್ರಾರಂಭಿಸಿದ ಆರ್.ಕೆ. ಲಕ್ಷ್ಮಣ್ ಇಂದು ಜಗತ್ ಪ್ರಸಿದ್ಧರು. ಬಿ.ವಿ. ರಾಮಮೂರ್ತಿ, ಕನ್ನೆಪ್ಪಾಡಿ, ರಾಮಕೃಷ್ಣಭಟ್, ಎಸ್.ಕೆ. ನಾಡಿಗ್ ವ್ಯಂಗ್ಯಚಿತ್ರ ಕ್ಷೇತ್ರಕ್ಕೆ ಕರ್ನಾಟಕದ ಹೆಮ್ಮೆಯ ಕೊಡುಗೆಗಳು. ಕನ್ನೆಪ್ಪಾಡಿ ರಾಮಕೃಷ್ಣರು 'ನವಭಾರತ'ಕ್ಕೆ ಬರೆಯುತ್ತಿದ್ದ ಶಿಂಗಣ್ಣ ಖ್ಯಾತಿಯ ಪಾಕೇಟ್ ಕಾರ್ಟೂನ್‌ಗಳು ಬಹಳ ಜನಪ್ರಿಯವಾಗಿತ್ತಲ್ಲದೆ. ಈ ರೀತಿಯ ಪಾಕೇಟ್ ಕಾರ್ಟೂನಿನ ಮೊದಲ ಸೃಷ್ಟಿಕರ್ತ ಅವರೇ ಎಂದು ಗುರುತಿಸಲ್ಪಟ್ಟಿದ್ದಾರೆ. ಅಲ್ಲದೆ ಇಂದು ಈ ವ್ಯಂಗ್ಯಚಿತ್ರಕಲೆಯನ್ನು ಉಳಿಸಿ ಚಿತ್ರಿಸುವುದರಲ್ಲಿ ನಮ್ಮ ಕರ್ನಾಟಕದ ಹಿರಿಯ ಹಾಗೂ ಕಿರಿಯ ವ್ಯಂಗ್ಯಚಿತ್ರಕಲಾವಿದರು ತಮ್ಮನ್ನು ಈ ಚಿತ್ರಕ್ಕೆ ತೊಡಗಿಸಿಕೊಂಡಿದ್ದಾರೆ.

ನಮ್ಮ ಕರ್ನಾಟಕದ ವ್ಯಂಗ್ಯಚಿತ್ರ ಕಲೆಯನ್ನು ಪ್ರೋತ್ಸಾಹಿಸುವುದು, ಹೊಸ ವ್ಯಂಗ್ಯ ಚಿತ್ರಕಾರರಿಗೆ ತರಬೇತಿ ನೀಡುವುದು ಹಾಗೂ ಈ ಕಲೆಯನ್ನು ಜನಪ್ರಿಯಗೊಳಿಸುವ ಗುರಿ ಇಟ್ಟುಕೊಂಡು ೧೯೭೭ರಲ್ಲಿ ಕರ್ನಾಟಕದ ವ್ಯಂಗ್ಯಚಿತ್ರಕಾರರ ಸಂಘ ಹುಟ್ಟಿಕೊಂಡಿತು.

### ವ್ಯಂಗ್ಯಚಿತ್ರಕಲಾ ಸಮ್ಮೇಳನಗಳು

ನಾವು ಕಷ್ಟಪಡದೆ ಹಂಚಿಕೊಳ್ಳಬಹುದಾದ ಸುಖವೆಂದರೆ ನಗುವುದು. ಆದರೆ ಇಂದು ನಗುವುದಕ್ಕಾಗಿಯೇ ರಚನೆಗೊಂಡಿರುವ ಕೂಟಗಳು, ಕ್ಲಬ್ಬುಗಳು, ಸಂಘಗಳನ್ನು ನೋಡಿದರೆ 'ನಗು'ವಿಗೆ ಬಂದಿರುವದನ್ನು ಅಳೆಯಬಹುದು. ಈ ಹಿನ್ನೆಲೆಯಲ್ಲಿ 'ನಗು ಸಂರಕ್ಷಣಾ ಕೇಂದ್ರ'ಗಳು ಇಂದು ಎಲ್ಲೆಡೆ ಹೆಚ್ಚುತ್ತಿರುವುದನ್ನು ನಾವು ಗಮನಿಸಬಹುದಾಗಿದೆ.

೧೯೭೭ ನವೆಂಬರ್ ೧ ರಂದು ಸ್ಥಾಪನೆಯಾದ 'ಕರ್ನಾಟಕ ವ್ಯಂಗ್ಯಚಿತ್ರಕಾರರ ಸಂಘ' ಈ ನಗೆ ಕೂಟಗಳಿಗಿಂತ ಭಿನ್ನ ಕರ್ನಾಟಕದ ನಾನಾ ಭಾಗಗಳಲ್ಲಿದ್ದು, ಪರಸ್ಪರ ಸಂಪರ್ಕವೇ ಇಲ್ಲದೆ ವ್ಯಂಗ್ಯಚಿತ್ರಗಳನ್ನು ಬರೆಯುತ್ತಿದ್ದ ಕಲಾವಿದರು ರಚನೆಕೊಂಡಿರುವ ಸಂಸ್ಥೆ ಇದಾಗಿದೆ. ಅಲ್ಲಿ ಈ ಸಂಸ್ತೆಯು ಈಗಲೇ ಬೆಳ್ಳಿಹಬ್ಬವನ್ನು ಪೂರೈಸಿಕೊಂಡಿದೆ. ಅಲ್ಲದೆ ಈ ಸಂಸ್ಥೆಯು ವ್ಯಂಗ್ಯಚಿತ್ರಕಲಾವಿದರನ್ನು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಅನೇಕ ಕಲಾವಿದರನ್ನು ಸನ್ಮಾನಿಸುತ್ತಿದೆ.

೧೯೭೮ರಲ್ಲಿ ಉಡುಪಿಯಲ್ಲಿ ಪ್ರಥಮ ಸಮ್ಮೇಳನ ನಡೆಯಿತು. ಇದುವರೆಗೆ ೭ ಸಮ್ಮೇಳನಗಳು ನಡೆದಿವೆ. ಪ್ರಥಮ ಸಮ್ಮೇಳನದಲ್ಲಿ ಎಂ.ಟಿ.ವಿ. ಆಚಾರ್ಯ್, ಆರ್.ಮೂರ್ತಿಯವರನ್ನು ಸನ್ಮಾನಿಸಲಾಯಿತು. ೧೯೭೯ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ದ್ವಿತೀಯ ಸಮ್ಮೇಳನದಲ್ಲಿ ಆರ್.ಕೆ. ಲಕ್ಷ್ಮಣ್, ಅಬೂ ಅಬ್ರಹಾಂ, ಮಾರಿಯೋ ಮಿರಾಂಡರನ್ನು ಗೌರವಿಸಲಾಯಿತು. ಇತರ ಸಮ್ಮೇಳನಗಳಲ್ಲೂ ರಾಜ್ಯದ ಹಿರಿಯ ವ್ಯಂಗ್ಯಚಿತ್ರ ಕಾರರಲ್ಲದೆ, ಹೊರ ರಾಜ್ಯದ ಖ್ಯಾತ ವ್ಯಂಗ್ಯಚಿತ್ರ ಕಲಾವಿದರನ್ನು ಸನ್ಮಾನಿಸಲಾಗಿದೆ. ನಾಲ್ಕು ಮತ್ತು ಐದನೇ

ಸಮ್ಮೇಳನಗಳು ಗುಲ್ಬರ್ಗಾ ಮತ್ತು ಬೆಂಗಳೂರಿನಲ್ಲಿ ನಡೆದಿದೆ. ಆರನೇ ವ್ಯಂಗ್ಯಚಿತ್ರಕಾರರ ಸಮ್ಮೇಳನ ಕನ್ನಡ ಸಾಹಿತ್ಯ ಪರಿಷತ್ತಿನ ಕೃಷ್ಣರಾಜ ಪರೀಕ್ಷಣ ಮಂದಿರದಲ್ಲಿ ನಡೆಯಿತು. ರಾಜ್ಯ ವಾರ್ತಾ ಮತ್ತು ಪ್ರಚಾರ ಇಲಾಖೆಯ ಸಹಯೋಗದೊಂದಿಗೆ ಭಾರತೀಯ ವಿದ್ಯಾಭವನದಲ್ಲಿ ನಡೆದ ಏಳನೇ ಸಮ್ಮೇಳನವನ್ನು ಮುಖ್ಯಮಂತ್ರಿ ಜೆ.ಎಚ್. ಪಟೇಲ್ ಉದ್ಘಾಟಿಸಿದ್ದರು. ಮುಖ್ಯ ಅತಿಥಿಯಾಗಿ ದೆಹಲಿಯಿಂದ ಕನ್ನಡಿಗ ರಂಗಾ ಆಗಮಿಸಿದ್ದರು. ದಕ್ಷಿಣ ಭಾರತದ ಖ್ಯಾತ ವ್ಯಂಗ್ಯಚಿತ್ರಕಾರರಾದ ಕುಮಾರ್ ವೆಂಕಟೇಶ ಕೇಶವ್, ಮೋಹನ್ ಚಂದ್ರನ್, ಪೀಟರ್ ಭಾಗವಹಿಸಿದ್ದರು.

ಈ ಸಮ್ಮೇಳನದಲ್ಲಿ ಶ್ರೇಷ್ಠ ಸಾಧನೆಗಾಗಿ ಬಿ.ವಿ. ರಾಮಮೂರ್ತಿಯವರನ್ನು ವಿಶೇಷವಾಗಿ ಸನ್ಮಾನಿಸಲಾಗಿತ್ತು. ಜೊತೆಗೆ ಪೊನಪ್ಪ, ಮಾಯಾ ಕಾಮತ್ ಮತ್ತು ಶ್ರೀನಿವಾಸಲುರವರನ್ನು ಗೌರವಿಸಲಾಯಿತು.

ವ್ಯಂಗ್ಯಚಿತ್ರ ಕಲಾವಿದರಿಂದ ೧೦ ವರ್ಷಗಳಿಂದ ವಾಯುಮಾಲಿನ್ಯಕ್ಕೆ ಸಂಬಂಧಿಸಿದಂತಹ ಕೆಲವು ಹಿರಿಯ ವ್ಯಂಗ್ಯಚಿತ್ರಗಳನ್ನು ರಚಿಸಿದ್ದಾರೆ. ಅಲ್ಲದೆ ಇಲ್ಲಿಗಾಗಲೇ ಬಾರಿ ಕಾರ್ಯಾಗಾರವನ್ನು ಏರ್ಪಡಿಸಿ ಸಂಘದಿಂದ ಅನುಭವಿ ವ್ಯಂಗ್ಯಚಿತ್ರಕಾರರಿಂದ ಮಾರ್ಗದರ್ಶನ ನೀಡಿದೆ. ಧಾರವಾಡ, ಮಂಗಳೂರರಲ್ಲಿ ಎರಡುಬಾರಿ, ಮಂಗಳೂರು, ಮೈಸೂರಿನಲ್ಲಿ ಎರಡುಬಾರಿ ಹಾಗೂ ಬೆಂಗಳೂರಿನಲ್ಲಿ ೪ ಬಾರಿ ನಡೆಸಲಾಗಿದೆ. ವಿಶ್ವಜನಸಂಖ್ಯೆದಂದೆ ಸ್ಥಳದಲ್ಲಿಯೇ ಅನೇಕ ಹಿರಿಯ ಹಾಗೂ ಕಿರಿಯ ಕಲಾವಿದರಿಂದ ವ್ಯಂಗ್ಯ ಚಿತ್ರಗಳನ್ನು ಬಿಡಿಸಲಾಯಿತು. ಗುಜ್ಜಾರಪ್ಪ, ವಿ.ಜಿ.ನರೇಂದ್ರ, ಪಿ.ಬಿ. ಪಾಂಡುರಂಗರಾವ್, ಸತೀಶ್, ಯತೀಶ್ ಶೆಟ್ಟಿಗಾರು ವಿ.ಆರ್.ಸಿ. ಶೇಖರ್, ವಿ ಗೋಪಾಲ್ ಎಲ್ಲಾ ಕಲಾವಿದರಿಂದ ವ್ಯಂಗ್ಯಚಿತ್ರಗಳನ್ನು ರಚಿಸಿದರು. ಇದಲ್ಲದೆ ಅನೇಕ ಕಡೆಗಳಲ್ಲಿ ಕಲಾ ಶಿಬಿರಗಳು ಕಲಾ ಪ್ರಾತ್ಯಕ್ಷಿಕೆಗಳು ಹಾಗೂ ವ್ಯಂಗ್ಯಚಿತ್ರಗಳನ್ನು ರಚಿಸುವ ವಿಧಾನಗಳನ್ನು ಜನತೆಗೆ ಮುಟ್ಟುವಂತೆ ನಮ್ಮ ಹಿರಿಯ ಕಿರಿಯ ವ್ಯಂಗ್ಯಚಿತ್ರಕಲಾವಿದರು ಪ್ರಸ್ತುತ ದಿನಗಳಲ್ಲಿ ನಡೆಸುತ್ತಾ ಬಂದಿದ್ದಾರೆ.

* * *

ಅಧ್ಯಾಯ : ಐದು

# ವ್ಯಂಗ್ಯ ಚಿತ್ರಕಲೆಯ ಸಾಹಿತ್ಯ ಸಮೀಕ್ಷೆ



ಸಾಹಿತ್ಯ ಪ್ರಕಾರವು ಇತ್ತೀಚಿನ ದಿನಗಳಲ್ಲಿ ಹಲವು ಜ್ಞಾನಶಾಖೆಗಳಲ್ಲಿ ಪ್ರಬುದ್ಧವಾಗಿ ಬೆಳೆದು ಬರುತ್ತಿದೆ. ಹಿಂದಿನ ದಿನಗಳಲ್ಲಿ ಕೇವಲ ಸುದ್ಧ-ಸಾಹಿತ್ಯವನ್ನು ಮಾತ್ರ ಸಾಹಿತ್ಯ ಪ್ರಕಾರವೆಂಬುದಾಗಿ ಪರಿಗಣಿಸುತ್ತಿದ್ದ ಸಂದರ್ಭಕ್ಕಿಂತ ಭಿನ್ನವಾಗಿ ವಿವೇಚಿಸುವ ಆಲೋಚಿಸುವ ಮನಸ್ಸುಗಳು ಈ ಹೊತ್ತು ಹೆಚ್ಚುತ್ತಿವೆ. ವೈಜ್ಞಾನಿಕ, ಮಾನವಿಕ ಹಾಗೂ ಲಲಿತಕಲೆಗಳಂತಹ ಸಾಹಿತ್ಯೇತರ ಜ್ಞಾನಶಾಖೆಗಳೂ ಇಂದು ತಮ್ಮದೇ ಆದ ಸಾಹಿತ್ಯದಿಂದಾಗಿ ವಿಜ್ಞಾನ ಸಾಹಿತ್ಯ, ವೈದ್ಯಸಾಹಿತ್ಯ, ಲಲಿತಕಲಾ ಸಾಹಿತ್ಯ, ಕಾನೂನು ಸಾಹಿತ್ಯ, ಕೃಷಿ ಸಾಹಿತ್ಯ ಎಂಬ ಹೆಸರಿನಿಂದ ಗುರುತಿಸಿಕೊಂಡಿರುವುದನ್ನು ನೋಡಬಹುದಾಗಿದೆ. ಇವುಗಳಂತೆ ಇಂದಿನ ದಿನಗಳ ವ್ಯಂಗ್ಯ ಚಿತ್ರಕಲೆಯ ಸಾಹಿತ್ಯ ಸಮೀಕ್ಷೆಯನ್ನು ಸಹ ನೋಡಬಹುದಾಗಿದೆ. ವ್ಯಂಗ್ಯ ಚಿತ್ರಕಲೆಯು ಬಹಳ ಹಿಂದಿನ ಕಾಲದಿಂದಲೂ ನಮ್ಮೆಲ್ಲ ಕಲೆಗಳ ಮದ್ಯೆ ಬೆಳೆದು ಬಂದು ತನ್ನದೇ ಆದ ಒಂದು ಅಸ್ತಿತ್ವವನ್ನು ಉಳಿಸಿಕೊಂಡುಬಂದಿದೆ. ಆದರೆ ಈ ಕಲೆಯನ್ನು ಪೋಷಿಸಿ ಬೆಳೆಸುವಲ್ಲಿ ಕೆಲವೆ ಕೆಲವು ಕಲಾವಿದರು ಶ್ರಮಿಸುತ್ತಿದ್ದಾರೆ. ಆದರೆ ಈ ಕಲೆಯು ನಮ್ಮ ಆದಿಮಾನವ ಕಾಲದಿಂದ ಹಿಡಿದು ಶಿಲ್ಪಕಲೆ, ಚಿತ್ರಕಲೆಗಳಲ್ಲೂ ಸಹ ಈ ವ್ಯಂಗ್ಯ ಚಿತ್ರಕಲೆಯನ್ನು ನೋಡಬಹುದಾಗಿದೆ. ಈ ವ್ಯಂಗ್ಯಚಿತ್ರಕಲೆಯು ಮಾನವನ ಇತಿಹಾಸದಷ್ಟೆ ಪ್ರಾಚೀನವಾಗಿದೆ. ಈ ಕಲೆಯು ಹತ್ತು ಸಹಸ್ರ ವರ್ಷಗಳಷ್ಟು ಮುಂಚೆಯೇ ಮನುಷ್ಯ ತಾನು ವಾಸಿಸುತ್ತಿದ್ದ ಗವಿಯ ಗೋಡೆಗಳ ಮೇಲೆ, ಕಲ್ಲಿನ ಮೇಲೆ ಮತ್ತು ಎಲುಬಿನ ಉಪಕರಣಗಳ ಮೇಲೆ ಚಿತ್ರಗಳನ್ನು ಕೆತ್ತಿದ್ದ, ಇಂತಹ ಚಿತ್ರಗಳು ೨೫,೦೦೦ ಸಾವಿರ ವರ್ಷಗಳಿಗಿಂತಲೂ ಹಿಂದಿನ ಅತಿ ಪ್ರಾಚೀನವಾದುದೆಂದೇ ತಿಳಿದುಬರುತ್ತವೆ. ಇಂತಹ ಚಿತ್ರಗಳು ಪ್ರಾನ್ಸ್‌ನಲ್ಲಿ ಲಭ್ಯವಾಗಿವೆ.

ಲಲಿತಕಲೆಗಳ ಕಲಾಪ್ರಕಾರಗಳಾದ ಸಾಹಿತ್ಯ, ಸಂಗೀತ, ನೃತ್ಯ ಮತ್ತು ನಾಟಕ, ಶಿಲ್ಪ, ಚಿತ್ರ ಮುಂತಾದ ಕಲೆಗಳಿಗೆ ಅವುಗಳದೇ ಆದ ಪ್ರತ್ಯೇಕ ವ್ಯಾಕರಣಾಂಶಗಳಿವೆ. ಅಭಿವ್ಯಕ್ತಿ ಮಾಧ್ಯಮವು ವಿಭಿನ್ನವಾಗಿದೆ. ಇಂದು ಅವು ಬೇರೆ ಬೇರೆಯಾದ ಸಾಹಿತ್ಯ ಪ್ರಕಾರವನ್ನು ಹೊಂದಿದೆ. ಪಾಶ್ಚಿಮಾತ್ಯರು ಈ ಬಗೆಯ ಕಲಾ ಸಾಹಿತ್ಯವನ್ನು ಬೇರೆಯಾಗಿ ವಿಂಗಡಿಸಿ ಅಧ್ಯಯನ ಮಾಡುವ ಕ್ರಮವನ್ನು ನಮಗಿಂತಲೂ ಮೊದಲೆ ಪ್ರಾರಂಭಿಸಿಕೊಂಡು ಬಂದಿದ್ದಾರೆ. ಆದರೆ ಪ್ರಾಚೀನ ಭಾರತೀಯರು ಕಲಾ ಸಾಹಿತ್ಯವನ್ನು ಒಂದು ಪ್ರತ್ಯೇಕ ವಿಭಾಗವಾಗಿ ಪರಿಗಣಿಸದೇ ಸಾಂದರ್ಭಿಕವಾಗಿ ರಚನೆ ಮಾಡುತ್ತಾ ಬಂದರು ತೀರ ಇತ್ತೀಚಿಗೆ ಭಾರತೀಯರೂ ಈ ಲಲಿತಕಲಾ ಸಾಹಿತ್ಯವೂ ಒಂದು ಅಧ್ಯಯನದ ಶಿಸ್ತಾಗಿ ಬೆಳೆಯುತ್ತಿರುವುದು ಈ ಕ್ಷೇತ್ರದಲ್ಲಾದ ಬದಲಾವಣೆ ಮತ್ತು ಬೆಳವಣಿಗೆ ಕೂಡ

ಆಗಿದೆ. ಅಂತೆಯೇ ನಮ್ಮ ಕರ್ನಾಟಕದಲ್ಲಿ ವ್ಯಂಗ್ಯ ಚಿತ್ರಕಲೆಯ ಸಾಹಿತ್ಯವು ನಿಧಾನವಾದ ರೀತಿಯಲ್ಲಿ ತನ್ನ ಅಸ್ತಿತ್ವವನ್ನು ಹೊಂದುತ್ತ ಮುಂದೆ ನಡೆಯುತ್ತಿದೆ. ವ್ಯಂಗ್ಯ ಚಿತ್ರಗಳು ರಚನೆ ಮಾಡುವುದಷ್ಟೇ ಒಂದು ರೀತಿಯಾದ ಕೆಲಸವಾಗಿತ್ತು. ಆದರೆ ಇವತ್ತಿನ ದಿನಗಳಲ್ಲಿ ವ್ಯಂಗ್ಯಚಿತ್ರಕಲಾ ಸಾಹಿತ್ಯವು ತನ್ನ ಕ್ಷೇತ್ರದಲ್ಲೂ ಬದಲಾವಣೆಯನ್ನು ಮತ್ತು ಬೆಳವಣಿಗೆಯನ್ನು ನಾವು ಇಲ್ಲಿ ಗುರುತಿಸಬಹುದಾಗಿದೆ.

ಸಾಮಾನ್ಯವಾಗಿ ಸಾಹಿತ್ಯದಲ್ಲಿ ಕಾವ್ಯ, ಕಥೆ, ಕಾದಂಬರಿ, ಜೀವನ ಚರಿತ್ರೆ ವಿಮರ್ಶೆ, ಸಂಶೋಧನೆ ಸಂಪಾದನೆ, ಅನುವಾದ, ಪ್ರವಾಸ ಕಥನ ಮುಂತಾದ ಅನೇಕ ಬಗೆಗಳು ಒಳಗೊಂಡಿರುತ್ತದೆ. ಅದೇ ರೀತಿ ಲಲಿತಕಲಾ ಸಾಹಿತ್ಯದಲ್ಲಿ ಶಿಲ್ಪ, ಸಂಗೀತ, ನೃತ್ಯ, ನಾಟಕ, ವಾಸ್ತುಶಿಲ್ಪ, ಸಾಹಿತ್ಯ, ಚಿತ್ರಕಲೆಯಂತಹ ವಿಷಯಗಳನ್ನು ಪ್ರಮುಖವಾಗಿ ಪರಿಗಣಿಸುತ್ತಾರೆ. ಇವುಗಳಲ್ಲಿ ಪ್ರಸ್ತುತ ಚಿತ್ರಕಲಾ ಸಾಹಿತ್ಯವೂ ಒಂದಾಗಿದೆ. ಪ್ರಸ್ತುತ ವ್ಯಂಗ್ಯ ಚಿತ್ರಕಲಾ ಸಾಹಿತ್ಯವು ಇಂದು ಸಂಪಾದನೆ ವೈಚಾರಿಕತೆ, ವಿಮರ್ಶೆ, ಸಂಶೋಧನೆ, ಪತ್ರಿಕಾ ಸಾಹಿತ್ಯ ವ್ಯಕ್ತಿ ಅಧ್ಯಯನ ಮುಂತಾದ ಹಲವು ಪ್ರಕಾರಗಳಲ್ಲಿ ಮೈಚಾಚಿಕೊಂಡು ಬೆಳೆಯುತ್ತಿದೆ.

ಕರ್ನಾಟಕದಲ್ಲಿ ತೀರ ಇತ್ತೀಚೆಗೆ ಈ ವ್ಯಂಗ್ಯ ಚಿತ್ರಕಲಾ ಸಾಹಿತ್ಯವೂ ತನ್ನ ನೆಲೆಯನ್ನು ನಿಧಾನವಾಗಿ ಕಂಡುಕೊಳ್ಳುತ್ತಾ ವೈವಿಧ್ಯಮಯವಾಗಿ ರಚನೆಯಾಗುತ್ತಾ ಬಂದಿದೆ.

ಕರ್ನಾಟಕದ ವ್ಯಂಗ್ಯಚಿತ್ರಕಲಾ ಸಾಹಿತ್ಯದ ಕುರಿತು ಇಲ್ಲಿಯವರೆಗೆ ಒಂದು ಸ್ಪಷ್ಟ ಕಲ್ಪನೆ ಬಂದಿಲ್ಲವೆಂದರೆ ತಪ್ಪಾಗಲಾರದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಕರ್ನಾಟಕದ ವ್ಯಂಗ್ಯ ಚಿತ್ರಕಲಾ ಸಾಹಿತ್ಯದ ಪ್ರಾಚೀನತೆ ಬೆಳೆದು ಬಂದ ದಾರಿ ಸ್ವರೂಪ ಸಾಧ್ಯತೆಗಳನ್ನು ಕುರಿತು ಅಧ್ಯಯನ ಕೈಗೊಳ್ಳುವಂತಹ ಅವಶ್ಯಕತೆ ಇಂದು ತುಂಬಾ ಇದೆ. ಅಲ್ಲದೆ ಕರ್ನಾಟಕದ ವ್ಯಂಗ್ಯ ಚಿತ್ರಕಲಾ ಸಾಹಿತ್ಯದಲ್ಲಿರುವ ವಿವಿಧ ಪ್ರಕಾರಗಳನ್ನು ವ್ಯವಸ್ಥಿತವಾಗಿ ವಿಂಗಡಿಸಿಕೊಂಡು ವಿಶ್ಲೇಷಿಸುವ ಈ ಮೂಲಕ ಈ ನಾಡಿನ ಜನತೆ ವ್ಯಂಗ್ಯ ಚಿತ್ರಕಲಾ ಸಾಹಿತ್ಯ ರಚನೆಯಲ್ಲಿ ಯಾವ ಬಗೆಯ ಪಾತ್ರ ವಹಿಸುತ್ತವೆ ಎನ್ನುವಂತಹ ಬಹುಮುಖ್ಯ ಸಂಗತಿಗಳನ್ನು ಇಂತಹ ಅಧ್ಯಯನಗಳಿಂದ ತಿಳಿದುಕೊಳ್ಳುವ ಒಂದು ಪ್ರಯತ್ನವನ್ನು ಮಾಡಲಾಗಿದೆ.

ಕರ್ನಾಟಕದ ವ್ಯಂಗ್ಯ ಚಿತ್ರಕಲಾ ಸಾಹಿತ್ಯವು ತೀರ ಇತ್ತೀಚಿಗೆ ಬೆಳೆದು ಬಂದರೂ ಪ್ರಾಚೀನ ಕಾಲದಿಂದಲೂ ಆರಂಭದ ಹಂತವನ್ನು ಗುರುತಿಸಬಹುದಾಗಿದೆ. ಅಲ್ಲದೆ ಆದಿಮಾನವರ ಕಾಲದಿಂದಲೂ ಹಿಡಿದು ನಮ್ಮ ಶಿಲ್ಪಗಳಲ್ಲೂ, ಚಿತ್ರಗಳಲ್ಲೂ ಸಹ ಈ ವ್ಯಂಗ್ಯಚಿತ್ರಗಳನ್ನು ಗಮನಿಸಬಹುದಾಗಿದೆ. ಹೀಗೆ ಪ್ರಾಚೀನ ಕಾಲದಿಂದಲೂ ಈ ವ್ಯಂಗ್ಯ ಚಿತ್ರಕಲೆಯು ಬೆಳೆದು ವ್ಯಂಗ್ಯ ಚಿತ್ರಕಲೆಯ ಸಾಹಿತ್ಯವನ್ನು ಗುರುತಿಸಿ ಇದರ ಐತಿಹಾಸಿಕ ಹಿನ್ನೆಲೆಯನ್ನು ನಾವು ಗುರುತಿಸಬಹುದಾಗಿದೆ.

ಈ ಕರ್ನಾಟಕ ವ್ಯಂಗ್ಯಚಿತ್ರಕಲೆಯು ಪ್ರಾರಂಭಿಕ ಹಂತದಲ್ಲಿ ಸಂಪಾದನೆ ಸ್ಮರಣ ಸಂಚಿಕೆಗಳು. ಕೆಲವು ವೈಚಾರಿಕ ಮತ್ತು ವಿಮರ್ಶಾತ್ಮಕ ಕೃತಿಗಳೂ ಸಹಿತ ಸಂಪಾದನಾ ವ್ಯಾಪ್ತಿಯನ್ನು ಒಳಗೊಳ್ಳುತ್ತವೆ. ಅಲ್ಲದೆ ಪುಸ್ತಗಳ ಕೃತಿಗಳನ್ನು ಹಲವು ಕಲಾವಿದರು ಸಂಪಾದಿಸಿರುವುದು ಹಾಗೂ ಪ್ರಕಟಿಸಿರುವುದನ್ನು ನಾವು ನೋಡಬಹುದಾಗಿದೆ. ಇಲ್ಲಿ ಆಯಾ ವ್ಯಕ್ತಿಗಳ ಅಭಿರುಚಿಗೆ ರಚನೆಯಾದ ವ್ಯಂಗ್ಯಚಿತ್ರಗಳು, ಆಸಕ್ತಿಯು ಅವರ ಪರಿಚಯಗಳ ಪುಸ್ತಕಗಳನ್ನು ನೋಡಬಹುದಾಗಿದೆ.

ವ್ಯಂಗ್ಯಚಿತ್ರಕಲೆಯ ಸಂಪಾದನಾ ಸಾಹಿತ್ಯ, ಕಲಾ ಶೈಲಿಗೂ, ಕಲಾ ಶೈಲಿಗಳು, ಕಲಾವಿದನ ಜೀವನ ಮತ್ತು ಕೃತಿಗಳ ಹೀಗೆ ಹತ್ತು ಹಲವು ವಿಷಯಗಳಿಗೆ ಸಂಬಂಧಿಸಿದ ಕೃತಿಗಳಿವೆ.

ಈ ರೀತಿ ವೈವಿದ್ಯಮಯವಾದ ವ್ಯಂಗ್ಯ ಚಿತ್ರಕಲಾ ಸಂಪಾದನಾ ಸಾಹಿತ್ಯವನ್ನು ವಿಷಯಾನುಸಾರ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ನಮ್ಮ ಕರ್ನಾಟಕದಲ್ಲಿ ಕಲಾವಿದರ ಅವರ ವ್ಯಂಗ್ಯಚಿತ್ರಗಳಿಗೆ ಹೆಚ್ಚು ಆದ್ಯತೆ ಕೊಟ್ಟು ಕಲಾವಿದರ ಪರಿತಯಾತ್ಮಕ ಕಲಾಸಾಹಿತ್ಯ ಹೇರಳವಾಗಿ ಸೃಷ್ಟಿಯಾಗಿವೆ.

ವ್ಯಂಗ್ಯಚಿತ್ರಕಲಾ ಸಾಹಿತ್ಯದಲ್ಲಿ ಸಂಶೋಧನಾ ಸಾಹಿತ್ಯ ತನ್ನದೇ ಆದ ಮಹತ್ವದ ಸ್ಥಾನ ಪಡೆದುಕೊಂಡಿದೆ. ಮಾನವನ ಸಾಂಸ್ಕೃತಿಕ ಬದುಕಿನೊಟ್ಟಿಗೆ ಬೆಳೆದುಬಂದ ಚಿತ್ರಕಲೆಯ ಸಂಶೋಧನೆಯಿಂದ ಆಯಾ ಕಲಾ ಪ್ರಕಾರಗಳ ತಾಂತ್ರಿಕ ಅಂಶಗಳಲ್ಲದೆ ಆತನ ಜೀವನ ಪದ್ಧತಿಗಳಲ್ಲಾದ ಬದಲಾವಣೆಗಳಂತಹ ಸಂಗತಿಗಳು ಪ್ರಮುಖವಾಗಿ ತಿಳಿದು ಬರುತ್ತವೆ. ಇದುವರೆಗೆ ಪಿಎಚ್.ಡಿ ಪ್ರಬಂಧಗಳಾಗಲಿ ಡಿ.ಲಿಟ್ ಪ್ರಬಂಧಗಳಾಗಲಿ ನಡೆದಿಲ್ಲ. ಆದರೆ ಕೆಲವು ಲಘುಶೊಂದ ಪ್ರಬಂಧಗಳು ವಿಶೇಷ ಅಧ್ಯಯನಗಳು ಹಿನ್ನೆಯಲ್ಲಿ ರಚನೆಯಾದ ಕೃತಿಗಳು ಮುಂತಾದವುಗಳು ಸೇರುತ್ತವೆ. ಅಲ್ಲದೆ ವ್ಯಂಗ್ಯಚಿತ್ರಕಲಾ ಸಮ್ಮೇಳನಗಳಲ್ಲಿ ಹಾಗೂ ವ್ಯಂಗ್ಯ ಚಿತ್ರಕಲಾ ಸಮ್ಮೇಳನಗಳಲ್ಲಿ ಹಾಗೂ ವ್ಯಂಗ್ಯಚಿತ್ರಕಲಾ ಪ್ರದರ್ಶನಗಳಲ್ಲಿ ಹೊರತರುವ ಕ್ಯಾಟ್‌ಲಾಗ್, ಚಿತ್ರಕಲಾ ಕೃತಿ, ಅಲ್ಪಂಗಳಿಂದ ಈ ವ್ಯಂಗ್ಯಚಿತ್ರಕಲಾ ಸಾಹಿತ್ಯವು ರೂಪಗೊಂಡಿದೆ. ಇದಲ್ಲದೆ ಕಲಾವಿದ ಕೆಲವು ತಾವು ರಚಿಸಿದ ಕೆಲವು ವ್ಯಂಗ್ಯಚಿತ್ರಗಳ ಸಂಗ್ರಹ ಹಾಗೂ ವ್ಯಕ್ತಿಗಳ ಪರಿಚಯಗಳು ಮತ್ತು ತಮ್ಮದೆ ಆದ ಶೈಲಿಯಲ್ಲಿ ವ್ಯಂಗ್ಯ ಚಿತ್ರಕಲಾ ಸಾಹಿತ್ಯವನ್ನು ಇತ್ತೀಚಿನ ದನಗಳಲ್ಲಿ ಇದರ ಬೆಳವಣಿಗೆಯನ್ನು ನಾವು ನೋಡಬಹುದಾಗಿದೆ.

ಇದುವರೆಗೆ ಕರ್ನಾಟಕದಲ್ಲಿ ವ್ಯಂಗ್ಯಚಿತ್ರಕಲೆಯನ್ನು ಕುರಿತು ಸಾಹಿತ್ಯದ ಬಗ್ಗೆ ನಡೆದಿರುವ ಅಧ್ಯಯನಗಳನ್ನು ಮತ್ತು ಆ ಹಿನ್ನಲೆಯಲ್ಲಿ ಬಂದ ಬರಹಗಳನ್ನು ಈ ಕೆಳಗಿನಂತೆ ಸಮೀಕ್ಷಿಸಲಾಗಿದೆ.

**ವ್ಯಂಗ್ಯ (ವಿ) ಚಿತ್ರ**

ಪಿ. ಮಹಮ್ಮದ್ ರವರ ವ್ಯಂಗ್ಯ (ವಿ) ಚಿತ್ರ ಸಂಕಲನವನ್ನು ಪ್ರಕಾಶಕರು ಚಿಂತನ ಪುಸ್ತಕರವರಿಂದ ಪ್ರಕಟಣೆಮಾಡಲಾಗಿದೆ. ಈ ಪುಸ್ತಕದಲ್ಲಿ ವ್ಯಂಗ್ಯಚಿತ್ರಗಳ ಮಹತ್ವ ವ್ಯಂಗ್ಯ ಮಾನವ ಸಮಾಜದಲ್ಲಿ ಅಸಮಾನತೆ ಹಣತೆ ಹಾಕಿದಂದಿನಿಂದಲೂ ಮನುಕುಲದ ಬೆಳವಣಿಗೆಯ ಅವಿಭಾಜ್ಯ ಅಂಗವಾಗಿಯೇ ಬಂದಿದೆ. ಈ ವ್ಯಂಗ್ಯ ಚಿತ್ರಗಳು ಮಾತ್ರ ಆಧುನಿಕ ಜಗತ್ತಿನ ಉತ್ಪನ್ನ ಈಗಂತೂ ಅದು ಪತ್ರಿಕೆಗಳಲ್ಲಿ ಮಾತ್ರವಲ್ಲ. ಪ್ರಜಾಪ್ರಭುತ್ವದಲ್ಲಿಯೂ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿದೆ. ವ್ಯಂಗ್ಯಚಿತ್ರಕಾರರು ನಮ್ಮ ಸಮಾಜದಲ್ಲಿ ಒಂದು ವಿಶಿಷ್ಟ ಪಾತ್ರವೆಂಬುದು ಈ ಪುಸ್ತಕದಲ್ಲಿ ಹೇಳಲಾಗಿದೆ.

'ವ್ಯಂಗ್ಯ ಚಿತ್ರಕಾರರು ಬಂಡಾಯ ನೆಲೆಯ ಚಿಂತನೆಯನ್ನು ಹೊಂದಿದ್ದು ಕಲೆಯನ್ನು ಪ್ರತಿಭಟನೆಯ ಅಸ್ತ್ರವಾಗಿ ಸಮರ್ಥವಾಗಿ ಪ್ರಯೋಗಿಸಿದ ಪರಂಪರೆಯನ್ನು ಉಳ್ಳವರಾಗಿದ್ದಾರೆ. ಸುಧಾ ಮತ್ತು ಡೆಕ್ಕನ್ ಹೆರಾಲ್ಡ್‌ನಲ್ಲಿ ಪ್ರಕಟವಾದ ಕೆಲವು ಅತ್ಯುತ್ತಮ ಕಾರ್ಟೂನ್‌ಗಳನ್ನೊಳಗೊಂಡಿರುವ ಈ ಮೊದಲ

ಸಂಕಲನವಿದಾಗಿದೆ. ಈ ಸಂಗ್ರಹಕ್ಕೆ ಮುನ್ನುಡಿ ಬರೆದು ಕೊಡಲು ಸಂತೋಷದಿಂದ ಬಿಟ್ಟುಕೊಂಡ ಡಾ. ನಟರಾಜ್ ಹುಳಿಯಾರ್ ಮಹಮ್ಮದ್‌ರವರ ಕೊಡುಗೆಯು ಎಲ್ಲಾ ಆಯಾಮಗಳ ಮೇಲೆ ಬೆಳಕು ಚೆಲ್ಲುವ ಒಂದು ವಿಶ್ಲೇಷಣೆಯನ್ನು ಇಲ್ಲಿ ಕೊಟ್ಟಿದ್ದಾರೆ.

ಒಬ್ಬ ಜವಾಬ್ದಾರಿಯುತ ಬುದ್ಧಿಜೀವಿಯ ಕೆಲಸವನ್ನು ಮಹಮ್ಮದ್ ತಮ್ಮ ಕಾರ್ಟೂನ್ ವೃತ್ತಿಯ ಆರಂಭದ ದಿನಗಳಿಂದಲೂ ನಿರ್ವಹಿಸುತ್ತಾ ಬಂದಿದ್ದಾರೆ. ೯೦ರ ದಶಕದಲ್ಲಿ ಅಯೋಧ್ಯಾ ರಾಜಕಾರಣದ ಫಲವಾಗಿ ಹುಟ್ಟಿದ ಪೂರ್ವಗ್ರಹ, ಹಿಂಸೆ. ಕುಟಿಲತೆ ಸೃಷ್ಟಿಸಿದ ವಿಭಜನೆಗಳನ್ನು ಕುರಿತು 'ಮಹಮ್ಮದ್' ಪತ್ರಿಕೆಯಲ್ಲಿ ಬರೆಯುತ್ತಿದ್ದ ತೀಕ್ಷ್ಣ ವ್ಯಂಗ್ಯಚಿತ್ರಗಳು ಮಂಗಳೂರಿನ ಆರ್ಟ್ ಗ್ಯಾಲರಿಯೊಂದರಲ್ಲಿ ಪ್ರದರ್ಶನಗೊಂಡು ಜಾತ್ಯಾತೀತ ಜನಾಭಿಪ್ರಾಯವನ್ನು ರೂಪಿಸಲು ಕೂಡ ನೆರವಾದವು ಹೀಗೆ 'ಮುಂಗಾಲು' ಪತ್ರಿಕೆಯಿಂದ 'ಪ್ರಜಾವಾಣಿ'ಯ ತನಕ ಮಹಮ್ಮದ್ ನಡೆದು ಬಂದ ಕತೆ ಕೂಡ ರೋಚಕವಾಗಿದೆ. ತಮ್ಮ ತಾರುಣ್ಯದ ಆರಂಭದಲ್ಲಿ ಪಡುಬಿದ್ರಿಯ ಗಡಿಯಾರದಂಗಡಿಯಲ್ಲಿ ಕೂತು ಗಡಿಯಾರದ ಅತಿ ಸೂಕ್ಷ್ಮ ಭಾಗಗಳಲ್ಲಿ ತಲ್ಲೀನರಾಗುತ್ತಿದ್ದ ಮಹಮ್ಮದ್ ತಮ್ಮ ನಿರಂತರ ಓದು ಹಾಗೂ ಪರಿಶ್ರಮದಿಂದ ಕರ್ನಾಟಕದ ಹಾಗೂ ಕ್ರಮೇಣ ಭಾರತದ ಮುಖ್ಯ ವ್ಯಂಗ್ಯಚಿತ್ರಕಾರರಾಗಿ ಆ ಮೂಲಕ ಚಿಕಿತ್ಸಕ ಬುದ್ಧಿಜೀವಿಯಾಗಿ ಬೆಳೆದರು. ಕೇವಲ ತಮ್ಮ ಸುತ್ತಮುತ್ತಲಿನ ವಿದ್ಯಮಾನಗಳಷ್ಟೇ ಅಲ್ಲದೆ. ಜಗತ್ತಿನ ವಿವಿಧ ಭಾಗಗಳ ರಾಜಕೀಯ ಆರ್ಥಿಕ ಘಟನೆಗಳಿಗೆ ವ್ಯಾಖ್ಯಾನ ಹಾಗೂ ಪ್ರತಿಕ್ರಿಯೆಗಳನ್ನು ನೀಡುತ್ತಾ ಬಂದಿರುವ ಮಹಮ್ಮದರ ಜಾಗತಿಕ ಜ್ಞಾನ ಕೂಡ ವಿಶಿಷ್ಟವಾದದ್ದು. ಅಲ್ಲವೆ ಇವರು ಜನಿಸಿದ್ದು ಪಿ. ಮಹಮ್ಮದ್ ವ್ಯಂಗ್ಯಚಿತ್ರಕಾರರಾಗಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದ್ದು ಅಲ್ಲದೆ ಇವರು ಪಡೆದ ಪ್ರಶಸ್ತಿಗಳನ್ನು ಈ ಪುಸ್ತಕದ ವಿವರವಾಗಿ ನೀಡಲಾಗಿದೆ. ಅಲ್ಲದೆ ಕೆಲವು ರಾಜಕೀಯ, ಸಾಮಾಜಿಕ, ಹಾಸ್ಯವಾಗಿ ರಚಿಸಿದ ಕೆಲವು ವ್ಯಂಗ್ಯ ಚಿತ್ರಗಳನ್ನು ಈ ಸಂಕಲನದಲ್ಲಿವೆ.

**ಸ್ವತಂತ್ರ್ಯ ಭಾರತ - ವ್ಯಂಗ್ಯ ಚಿತ್ರಗಳಲ್ಲಿ**

ಇದರ ಪ್ರಕಾಶಕರು ಎಂ.ಎಸ್. ನಾಯ್ಡು ಟ್ರಸ್ಟ್‌ರವರದು. ಶ್ರೀಮತಿ ಭೂಪತಿರವರ ''ಸ್ವತಂತ್ರ್ಯ ಭಾರತ -ವ್ಯಂಗ್ಯ ಚಿತ್ರಗಳಲ್ಲಿ'' ಪುಸ್ತಕವನ್ನು ಸಂವಿಧಾನವನ್ನು ಆಧಾರವಾಗಿಟ್ಟುಕೊಂಡು ಅದರಲ್ಲಿರುವ ಪರಿಕಲ್ಪನೆಯನ್ನು ಆಯ್ದುಕೊಂಡು, ವ್ಯಂಗ್ಯಚಿತ್ರಗಳ ಮೂಲಕ ಸಂವಿಧಾನವನ್ನು ಎತ್ತಿ ಹಿಡಿಯುವ ಕೆಲಸವನ್ನು ವ್ಯಂಗ್ಯಚಿತ್ರಗಳಲ್ಲಿ ತೋರಿಸಿದ್ದಾರೆ. ಒಬ್ಬ ಹಿರಿಯ ನಾಗರಿಕಳಾಗಿ, ನ್ಯಾಯವಾದಿಯಾಗಿ ಮತ್ತು ಸಮಾಜ ಸೇವಕಿಯಾಗಿ ಈ ಸಮಾಜದಲ್ಲಿ ಇವರು ಕಂಡದ್ದು ಬಹಳಷ್ಟಿದೆ. ಬಹುಪಾಲು ಜನರು 'ಇಸ್ಲಾಂ ಸಂಸ್ಕೃತಿ'ಯಿಂದ ಗೊಂದಲಿಕ್ಕೀಡಾಗಿರುವುದನ್ನು ಕಾಣಬಹುದು. ಅವರು ತಮ್ಮ ತನವನ್ನು ಮರೆತು ಸ್ವಾರ್ಥ ಮತ್ತು ಭ್ರಷ್ಟಾಚಾರಕ್ಕೆ ಒಳಗಾಗಿ ದೇಶ ಕಟ್ಟುವ ಕಾಯಕವನ್ನು ಬಲಿಕೊಟ್ಟಿದ್ದಾರೆ. ''ದೇಶ ನನಗೆ ಏನು ಕೊಟ್ಟಿದೆ ಎನ್ನುವುದಕ್ಕಿಂತ ದೇಶಕ್ಕೆ ನಾನೇನು ಕೊಟ್ಟಿದ್ದೇನೆ'' ಎನ್ನುವ ನಿಟ್ಟಿನಲ್ಲಿ ಯೋಚಿಸುವವರು ಕಣ್ಮರೆಯಾಗಿದ್ದಾರೆ. ಇಷ್ಟೇ ಅಲ್ಲದೆ ದೇಶಾಭಿಮಾನದ ಕೊರತೆ ಇಂದು ಇಲ್ಲೆಲ್ಲೂ ಕಂಡುಬರುತ್ತದೆ. ಈ ರೋಗ ಹೋಗಲಾಡಿಸಬೇಕಾದರೆ ಮಕ್ಕಳು ಮತ್ತು ಯುವ ಜನಾಂಗದ ರಕ್ತದ ಕಣಕಣದಲ್ಲೂ ದೇಶಾಭಿಮಾನದ ಬೀಜವನ್ನು ಬಿತ್ತಬೇಕು. ಈ ಪ್ರಯತ್ನ

ತಮ್ಮ ವ್ಯಂಗ್ಯಚಿತ್ರಗಳ ಮೂಲಕ ಮಾಡಲು ಪ್ರಯತ್ನಿಸಿದ್ದೇನೆಂದು ಹೇಳುತ್ತಾರೆ. ನಮ್ಮ ಕರ್ನಾಟಕದಲ್ಲಿ ಸುಮಾರು ೧೫೦ಕ್ಕೂ ಹೆಚ್ಚು ವ್ಯಂಗ್ಯ ಚಿತ್ರಕಾರರು ತಮ್ಮ ವಕ್ರ ರೇಖೆಗಳಿಂದ ಓದುಗರನ್ನು ರಂಜಿಸುತ್ತಿದ್ದಾರೆ. ಪುರುಷ ಪ್ರಧಾನವಾದ ಈ ಕ್ಷೇತ್ರದಲ್ಲಿ ಅನೇಕ ಮಹಿಳೆಯರೂ ಹೆಸರು ಮಾಡಿದ್ದಾರೆ. ಆದರೆ ಅವರ ಸಂಖ್ಯೆ ಬೆರಳೆಣಿಕೆಯಷ್ಟೇ. ಶ್ರೀಮತಿ ಭೂಪತಿ ಅವರು ಅಂಥವರಲ್ಲೊಬ್ಬರು.

ಶ್ರೀಮತಿ ಭೂಪತಿಯವರು ಸುಮಾರು ೮-೧೦ ವರ್ಷಗಳಿಂದ ಅವರು ಕಾನೂನು ವಿಷಯವಾಗಿ ವ್ಯಂಗ್ಯಚಿತ್ರ ರಚಿಸುತ್ತಿದ್ದಾರೆ. ಸಾಮಾಜಿಕ ಪರಿವರ್ತನೆಯಲ್ಲಿ ತುಂಬ ಕಳಕಳಿಯುಳ್ಳ ಒಬ್ಬ ಕಾರ್ಯಕರ್ತೆಯೂ ಆಗಿದ್ದಾರೆ. ಅವರು ೧೦-೧೫ ವರ್ಷಗಳಿಂದ ರಚಿಸುತ್ತಾ ಬಂದ ವ್ಯಂಗ್ಯಚಿತ್ರಗಳ ಸಂಕಲನವೇ ಈ ಪುಸ್ತಕವಾಗಿದೆ. ಇವರು ರಚಿಸಿದಂತಹ ಹಲವಾರು ವ್ಯಂಗ್ಯಚಿತ್ರಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

**ಕಲಾಗೋಪಾಲ**

ಹಿರಿಯ ವ್ಯಂಗ್ಯ ಚಿತ್ರಕಾರ ಛಾಯಾಗ್ರಾಹಕ ವರ್ಣಚಿತ್ರ ಸಂಯೋಜನಾಕಾರ ವಿ.ಗೋಪಾಲ್ ಅವರ ಕಲಾಯಾತ್ರೆ ದರ್ಶನವನ್ನು ಚಿರಂಜೀವಿಯವರು ಈ ಪ್ರಸ್ತಕದ ಸಂಪಾದಕರಾಗಿದ್ದಾರೆ. ಇಲ್ಲಿ ವಿ.ಗೋಪಾಲ್ ಬಹುಮುಖ ಪ್ರತಿಭೆವುಳ್ಳವರೆಂದು ಈ ಪುಸ್ತಕದ ಸಂಗ್ರಹದಲ್ಲಿದೆ ನೋಡಬಹುದಾಗಿದೆ. ಅಲ್ಲದೆ ಮುನ್ನುಡಿ, ಕೆಲವು ಮನದಾಳದ ಪ್ರಕಾಶಕರ ಮಾತುಗಳೊಂದಿಗೆ ಎಂ.ಎಸ್. ನರಸಿಂಹಮೂರ್ತಿಯವರೊಂದಿಗೆ ಹುಟ್ಟಿ ಬೆಳೆದ ಇಬ್ಬರು ಒಟ್ಟೊಟ್ಟಿಗೆ ಬಾಲ್ಯದ ಸವಿ ಕ್ಷಣಗಳನ್ನು ಅಲ್ಲದೆ ಒಟ್ಟಾರೆ ಬಾಲ್ಯದ ನೆನಪು ಅಲ್ಲದೆ ಅವರ ಕುಟುಂಬದ ಬಗ್ಗೆ ಒಟ್ಟಾರೆ ಮಾಹಿತಿಯಾಗಿ ಗೆಳೆಯರೊಂದಿಗೆ ಆಡಿ ಬೆಳೆದ ಕೆಲವು ನೆನಪುಗಳನ್ನು ಇಲ್ಲಿ ವಿವರಿಸಿದ್ದಾರೆ. ಅಲ್ಲದೆ ಇವರ ಒಟ್ಟಾರೆ ಶಿಕ್ಷಣ ಮತ್ತು ಬದುಕಿನ ಬಗ್ಗೆ ತಿಳಿಯಬಹುದಾಗಿದೆ. ಅಲ್ಲದೆ ಕರ್ನಾಟಕದ ಚಿತ್ರಕಲೆಯ ಕಲಾವಿದರನ್ನು ಪಟ್ಟಿಮಾಡುವಾಗ ಈ ತಲೆಮಾರಿನ ಅಗ್ರರ ಸಾಲಿನಲ್ಲಿ ನಿಲ್ಲುವ ಅಭಿಜಾತ ಕಲಾವಿದ.

ವಿ.ಗೋಪಾಲ್ ಅವರ ಕಲಾಲೋಕ ಅತ್ಯಂತ ವಿಸ್ತಾರವಾದದ್ದು. ಅವರು ಬರೀ ಒಬ್ಬ ವ್ಯಂಗ್ಯಚಿತ್ರಕಾರರಾಗಿ ಉಳಿಯದೆ. ಆಗಾಗ ತಮ್ಮನ್ನು ಆಕರ್ಷಿಸಿದ ಒಂದೊಂದು ಹೊಸ ಪ್ರಕಾರವನ್ನು ತಮ್ಮದಾಗಿಸಿಕೊಂಡಿದ್ದಾರೆ. ಯಾವುದನ್ನು ತಮ್ಮದಾಗಿಸಿಕೊಂಡರೂ ಅದಕ್ಕೊಂದು ಪರಿಣತಿಯ ಮುದ್ರೆಯನ್ನೊತ್ತಿಬಿಡತ್ತಾರೆ. ವ್ಯಂಗ್ಯ ಚಿತ್ರ ಅವರಿಗೆ ಹೆಸರು ತಂದಿತಾದರೂ ಅದಕ್ಕಿಂತಲೂ ಒದು ಹೆಜ್ಜೆ ಮುಂದೆಯೇ ಹೋಗಿ, ವರ್ಣಚಿತ್ರ ಸಂಯೋಜನೆ ಮತ್ತು ಛಾಯಾಗ್ರಹಣ ಮಾಧ್ಯಮಗಳಲ್ಲಿ ದೊಡ್ಡ ಎತ್ತರ ಸಾಧಿಸಿದ್ದಾರೆ. ವರ್ಣಚಿತ್ರರಚನೆಯಲ್ಲಿ ತಮ್ಮ ಗುರುಗಳಾದ ಶ್ರೀ ಎಂ.ಟಿ.ವಿ ಆಚಾರ್ಯ ಅವರ ರಚನೆಗಳಿಗೆ ಅತಿ ಹತ್ತಿರವಾದಂತೆ ಅನ್ನಿಸಿದರೂ, ಛಾಯಾಗ್ರಹಣ ಕಲೆಯಲ್ಲಿ ಮಾತ್ರ ಸಮಕಾಲೀನ ಪ್ರಮುಖರು ಸಮಸಮಕ್ಕೆ ಬೆಳೇದಿದ್ದಾರೆ. ಅವರ ವರ್ಣಚಿತ್ರ ಕಲೆಯಲ್ಲಿ ಛಾಯಾಗ್ರಹಣ ಇರುವಂತೆ ಅವರ ಛಾಯಾಗ್ರಹಣ ಚಿತ್ರಗಳಲ್ಲಿ ವರ್ಣಚಿತ್ರಗಳ ಸಮ್ಮೋಹಕತೆ ಇದೆ. ಅದು ಒಂದೊಂದು ಛಾಯಾಗ್ರಹಣ ಒಂದೊಂದು ಸುಂದರ ವರ್ಣಸಂಯೋಜನೆಗಳು ಹಾಗೆ ಕಾಣಿಸುತ್ತದೆ. ಈ ಪ್ರಕಾರದಲ್ಲಿ ಜಲವರ್ಣ, ತೈಲವರ್ಣ, ಮತ್ತು ಗಣೇಶನ ವಿಗ್ರಹದ ಚಿತ್ರಗಳನ್ನು ಅಲ್ಲದೆ ಕೆಲವು ವರ್ಣಚಿತ್ರಗಳನ್ನು ಪುಸ್ತಕದ ಕೊಮೆಯ ಭಾಗದಲ್ಲಿ ನೋಡಬಹುದಾಗಿದೆ.

**ಕರ್ನಾಟಕ ಕಲಾಪ್ರದರ್ಶನ ಸಂಪುಟ ಒಂದು**

ಈ ಸಂಪುಟ ಪ್ರಕಾಶಕರು ನವಕರ್ನಾಟಕ ಪಬ್ಲಿಕೇಷನ್ಸ್‌ರವು ಎಸ್.ಆರ್. ಭಟ್, ಚಿ.ಶ್ರೀನಿವಾಸರಾಜು ಅವರ ನೆನಪಿಗೆ ಈ ಸಂಪುಟವನ್ನು ಅರ್ಪಣೆ ಮಾಡಲಾಗಿದೆ.

ಕರ್ನಾಟಕ ಕಲಾದರ್ಶನವನ್ನು ಒಟ್ಟು ಒಂಭತ್ತು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಎರಡು ಸಂಪುಟಗಳನ್ನಾಗಿ ಮಾಡಲಾಗಿದೆ. ಇದರಲ್ಲಿ ವ್ಯಂಗ್ಯ ಚಿತ್ರಕಲೆಯ ಬಗ್ಗೆ ಎಂ. ವಿಶ್ವನಾಥ್‌ರವರು ಹೊಚ್ಚ ಹೊಸ ರೀತಿಯಲ್ಲಿ ವ್ಯಂಗ್ಯಚಿತ್ರಕಲೆ ಹಾಗೂ ಅನೇಕ ವ್ಯಂಗ್ಯಚಿತ್ರ ಕಲಾವಿದರು ರಚಿಸಿದಂತಹ ಹಲವಾರು ವ್ಯಂಗ್ಯಚಿತ್ರಗಳಿವೆ. ವ್ಯಂಗ್ಯ ಚಿತ್ರಕಲೆಯು ಸತ್ವ ಶಕ್ತಿ ಮತ್ತು ಪರಿಣಾಮಗಳನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ವ್ಯಕ್ತಿ ವ್ಯಂಗ್ಯಚಿತ್ರ ವಿಷಯ ವ್ಯಂಗ್ಯಚಿತ್ರ ಎರಡೂ ಬಗೆಯ ವ್ಯಂಗ್ಯ ಚಿತ್ರಕಲೆಯಲ್ಲಿ ನಮ್ಮ ಕಲಾವಿದರ ಕೊಡುಗೆ ವಿಶಿಷ್ಟವಾದದ್ದು.

ವ್ಯಂಗ್ಯಚಿತ್ರಕಲೆಯು ನಮ್ಮ ಭಾರತ ಹಾಗೂ ಕರ್ನಾಟಕದ ಇವರ ಸ್ಥಾನಮಾನದ ಬಗ್ಗೆ ಹಾಗೂ ಇದರ ಹುಟ್ಟು ಬೆಳವಣಿಗೆಯ ಬಗ್ಗೆ ವಿವರವಾದ ಮಾಹಿತಿಯಿದೆ. ವ್ಯಂಗ್ಯಚಿತ್ರಕಲೆಗೆ 'ಕಾರ್ಟೂನ್' ಎಂಬ ಪದ ಬಳಕೆ ಬಂದ ಪ್ರಸಂಗವಿದೆ. ಉತ್ತಮ ಕಾವ್ಯದಲ್ಲಿ ಧ್ವನಿಗೆ ಪ್ರತಿಮೆಗೆ ಪ್ರಾಧಾನ್ಯ. ವ್ಯಾಖ್ಯಾರ್ಥದಲ್ಲಿ ಹೇಳುವುದನ್ನು ಸೂಚ್ಯಾರ್ಥದಲ್ಲಿ ಹೇಳುವುದು ಪರಿಣತ ಮಾರ್ಗ; ಪರಿಣಾಮಕಾರಿ ಮಾರ್ಗ ಕೂಡ ವ್ಯಂಗ್ಯಚಿತ್ರದಲ್ಲಿ ಧ್ವನಿಗೆ ಪ್ರಾಧಾನ್ಯವಿರುವ ಕಾರಣ ಪರಿಣಾಮದಲ್ಲಿ ಹೆಚ್ಚುಶಕ್ತಿಶಾಲಿ ಎನಿಸಿದೆ.

ವ್ಯಂಗ್ಯಚಿತ್ರಗಳು ಹೇಗೆ ರಾಜಕೀಯ ಮತ್ತು ಸಾಮಾಜಿಕ ವ್ಯಾಖ್ಯಾನಗಳೋ ಹಾಗೆಯೇ ಅವು ಶಕ್ತಿಯುತವಾದ ಬದಲಾವಣೆಯ ಆಯುಧಗಳು ಅವು ದೃಶ್ಯವಾಗಿ ಇರುವುದರಿಂದ ಸಾಹಿತ್ಯಕ್ಕಿಂತಲೂ ವೇಗವಾಗಿ ಸಾಮಾಜಿಕ ಪ್ರಭಾವ ಬೀರುತ್ತವೆ. ಪೊಳ್ಳು ನಂಬಿಕೆಗಳನ್ನೂ ಪರಂಪರೆಗಳನ್ನೂ ಆಷಾಡಭೂತಿ ನಟನೆಗಳನ್ನು ಬುಡಸಹಿತ ಅಲುಗಿಸುವ ಶಕ್ತಿ ನಮ್ಮ ಕರ್ನಾಟಕದ ವ್ಯಂಗ್ಯಚಿತ್ರಗಳಿಗಿದೆ.

ವ್ಯಂಗ್ಯಚಿತ್ರಕಲೆ ಪತ್ರಿಕೋಧ್ಯಮದಲ್ಲಿ ಬೆಳೆದು ಬಂದಿದನ್ನು ಇಲ್ಲಿ ವಿವರವಾಗಿ ಹೇಳಲಾಗಿದೆ. ಕರ್ನಾಟಕದಲ್ಲಿ ಸಮೃದ್ಧ ವ್ಯಂಗ್ಯಚಿತ್ರ ಕೃಷಿಯ ಬಗ್ಗೆ ಕನಸನ್ನು ಕಂಡು ಅದಕ್ಕಾಗಿ ತಮ್ಮ ಸರ್ವಸ್ವವನ್ನು ಅರ್ಪಿಸಿ ದುಡಿದವರು ಎಂ.ಟಿ.ಎ ಅಚಾರ್ಯ ದಂಪತಿಗಳು ಇವಲ್ಲದೆ ಆರ್,ಕೆ. ಲಕ್ಷ್ಮಣ್, ವಿ.ಜೆ. ನರೇಂದ್ರ, ಬಿ.ಜಿ.ಎಲ್ ಸ್ವಾಮಿ, ಪಿ. ಮಹಮ್ಮದ್, ಪದ್ಮನಾಭ ಅಲ್ಲದೆ ಇನ್ನೂ ಅನೇಕ ಹಿರಿಯ-ಕಿರಿಯ ಕಲಾವಿದರ ಬೆಳದ ಕ್ಷೇತ್ರದಲ್ಲಿ ನೆಲೆನಿಂತ ತಮ್ಮನ್ನು ಈ ಕ್ಷೇತ್ರಕ್ಕೆ ಮಿಸಲಿಟ್ಟುಕೊಂಡು ಅನೇಕ ಜನ ಕಲಾವಿದ ವ್ಯಂಗ್ಯಚಿತ್ರಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಕರ್ನಾಟಕ ವ್ಯಂಗ್ಯಚಿತ್ರಕಾರರ ಸಂಘವು ಕಳೆದ ೩೧ ವರ್ಷಗಳಲ್ಲಿ ಹಲವು ಹತ್ತು ಆಯಾಮಗಳಲ್ಲಿ ಕ್ರಿಯಾತ್ಮಕ ಸೇವೆ ಸಲ್ಲಿಸಿದೆ. ರಾಷ್ಟ್ರೀಯ ಮಟ್ಟದಲ್ಲಿ ಸಂಘ ತನ್ನ ಅಸ್ತಿತ್ವವನ್ನು ಜಾಹಿರುಗೊಳಿಸಿತು. ರಾಷ್ಟ್ರದ ನೆರೆರಾಜ್ಯಗಳ ಹಾಗೂ ರಾಜ್ಯದ ಹತ್ತಾರು ಪ್ರತಿಭಾವಂತರ ಉಪಸ್ಥಿತಿಯಲ್ಲಿ ನಡೆದ ಏಳು ಸಮ್ಮೇಳನಗಳು ಬಗ್ಗೆ ಇಲ್ಲಿ ನೋಡಬಹುದು. ಅಲ್ಲದೆ ಕೆಲವು ವ್ಯಂಗ್ಯಚಿತ್ರಗಳ ಬಗ್ಗೆ ಕೆಲವು ಪ್ರಕಟನೆಗಳನ್ನು ಇಲ್ಲಿ ಸಂಗ್ರಹಿಸಿ

ಕೊಡಲಾಗಿದೆ. ಒಟ್ಟಾರೆ ವ್ಯಂಗ್ಯಚಿತ್ರಗಳ ಹಾಗೂ ಚಿತ್ರಕಲೆಯ ಬಗ್ಗೆ ಎಂ. ವಿಶ್ವನಾಥ್‌ರವರು ಸಾಕಷ್ಟು ಮಾಹಿತಿಯನ್ನು ಸಂಗ್ರಹಿಸಿಕೊಂಡು ಈ ಲೇಖನವನ್ನು ತಯಾರಿಸಿದ್ದಾರೆ.

ವ್ಯಂಗ್ಯ - ಬದುಕು

ಮನೋರಮಾ ಎಂ. ಭಟ್ ಮತ್ತು ಮುರಳಿಯ ಮಹಾಬಲ ಭಟ್‌ರವರ ಸಂಪಾದಕರಿಂದ ಈ ಪುಸ್ತಕವನ್ನು ಹೋರತರಲಾಗಿದೆ ಈ ಪ್ರಕಾರದಲ್ಲಿ ಪ್ರತಿಭಾವಂತನಾದ ಕಲಾವಿದನ ವ್ಯಂಗ್ರಚಿತ್ರಗಳ ಹಿನ್ನಲೆಯಲ್ಲಿ ಗಂಭೀರವಾದ ಚಿಂತನೆಗಳಿರುತ್ತವೆ. ಜನರ ಸಂಕಷ್ಟಗಳ ಬಗೆಗೆ ತೀವ್ರವಾದ ಕಳಕಳಿ ಇರುತ್ತದೆ. ರಾಜಕೀಯ ಮುಂದಾಳುಗಳ ಹಾಗೂ ಅಧಿಕಾರಿಗಳ ಸ್ವಾರ್ಥ, ಸಮಯ ಅಷಾಢಭೂತಿತನಗಳ ಬಗ್ಗೆ ಅಕ್ರೋಶವಿರುತ್ತದೆ. ಈ ಹಿನ್ನಲೆ ಇಲ್ಲದಿದ್ದರೆ ಅವು ಸತ್ವಾಹೀನವಾಗುತ್ತದೆ. ಆದುದರಿಂದ ವ್ಯಂಗ್ಯ ಚಿತ್ರಗಳಲ್ಲಿ ಮೇಲು ನೊಟಕ್ಕೆ, ಹಾಸ್ಯ, ವಿಡಂಬಸಿ ಇದ್ದರೂ ಅವುಗಳ ಉದ್ದೇಶ ನಮ್ಮನ್ನು ನಗಿಸುವುದು ಮಾತ್ರವಲ್ಲ ನಗುವಿನ ಆಚೆ ಇರುವ ಅಳಲು, ಕ್ರೊಧ, ಕಲಾವಿದನನ್ನು ಮುಂದೊತ್ತುತ್ತವೆ. ಇಂಥ ವ್ಯಂಗ್ಯ ಚಿತ್ರಗಳು ಆಯಾಸ್ಕಾಂತವು ಲೋಹವನ್ನು ಸೆಳೆಯುವಂತೆ ಜನರ ಗಮನವನ್ನು ತಮ್ಮೊಟಿಗೆ ಆಕರ್ಷಿಸುತ್ತವೆ. ಚಿತ್ರದ ಹಿನ್ನಲೆಯಲ್ಲಿರುವ ಚಿಂತನೆ, ಕಳಕಳಿ ಎಷ್ಟೇಷ್ಟು ಗಾಢವಾಗಿರುತ್ತದೋ, ಅಷ್ಟುಷ್ಟು ಅದರ ಆಕರ್ಷಣ ಶಕ್ತಿ ಬಲವಂತವಾಗಿರುತ್ತದೆ. ಇತಂಹ ಚಿತನೆಗಳಿಂದ ಪ್ರೇರಿತನಾದ ಕಲಾವಿದನು ಬಹುಕಾಲ - ಅವನು ಕ್ಷೇತ್ರದಿಂದ ನಿವೃತ್ತನಾದ ಮೇಲು - ಜನಮನದಲ್ಲಿ ನೆಲೆ ನಿಲ್ಲುತ್ತಾನೆ. ಎಂಬ ಮಾತನ್ನು ಒಟ್ಟಾರೆ ನಮ್ಮ ಕರ್ನಾಟಕದ ವ್ಯಂಗ್ಯಚಿತ್ರಕಲಾವಿದರ ಬಗ್ಗೆ ಹೇಳಲಾಗಿದೆ. ರಾಮಕೃಷ್ಣರ ವ್ಯಂಗ್ಯ ಚಿತ್ರಕ್ಷೇತ್ರದ ವ್ಯಾಪ್ತಿ ತುಂಬ ವಿಶಾಲವಾದುದು. ಇವರ ಚಿತ್ರಗಳು ಕೌಟುಂಬಿಕ, ಸಂಸಾರಿಕವಾದ ವಸ್ತುಗಳಿಂದ ಹಿಡಿದು ಸಾರ್ವಜನಿಕವಾದ, ರಾಜಕೀಯ, ಸಾಮಾಜಿಕ ಹಾಗೂ ಅಂತರಾಷ್ಟೀಯ ವ್ಯವಹಾರಗಳವರೆಗೆ ಇವರ ವ್ಯಂಗ್ಯ ಚಿತ್ರಗಳು ರಚಿಸಿದ್ದಾರೆ. ಅಲ್ಲದೆ ಬಾಲ್ಯಜೀವನ, ಶಿಕ್ಷಣ ಹಾಗೂ ವೃತ್ತಿ ಬದುಕಿನ ಬಗ್ಗೆ ಒಟ್ಟಾರೆ ಮಾಹಿತಿಯಿದೆ. ಪ್ರಶಸ್ತಿ ಹಾಗೂ ಸನ್ಮಾನಗಳ ಬಗ್ಗೆ ವಿವರಗಳನ್ನು ಕೊಟ್ಟು ಆ ಸಂದರ್ಭಗಳ ಬಗ್ಗೆ ಚರ್ಚಿಸಲಾಗಿದೆ. ಅದೆ ರಾಮಕೃಷ್ಣರವರ ಕಾಲೇಜುದಿನಗಳ ಬಗ್ಗೆಯು ಮತ್ತು ಅವರ ವೈಯಕ್ತಿಕ ಬದುಕಿನ ಬಗ್ಗೆಯು ಸಹ ಚರ್ಚೆಯಿದೆ. ಈ ಪುಸ್ತಕದಲ್ಲಿ ಇವರು ರಚಿಸಿದ ಕೆಲವು ವ್ಯಂಗ್ಯಚಿತ್ರಗಳಾದ ಶಿಂಗಣ್ಣಾಕ್ಕೆ ರಚಿಸಿದ ವ್ಯಂಗ್ಯಚಿತ್ರಗಳು ಹಾಗೂ ಇತರೆ ವ್ಯಂಗ್ಯ ಚಿತ್ರಗಳನ್ನು ಇಲ್ಲಿ ಕಾಣಬಹುದು.

ಕಲಾ ವಿಶೇಷಗಳು

ಈ ಪುಸ್ತಕದಲ್ಲಿ ಕೆಲವು ಅನ್ವಯಿಕ ಕಲೆಗಳ ಬಗ್ಗೆ ಒಂದೊಂದಾಗಿ ಚರ್ಚಿಸಲಾಗಿದೆ. ಅದರಲ್ಲಿ ವ್ಯಂಗ್ಯಚಿತ್ರಕಲೆ ಹಾಗೂ ರೇಖಾಚಿತ್ರಗಳ ಒಂದೇ ವಿಭಾಗಕ್ಕೆ ಹೋಲಿಸಿ ನೋಡಲಾಗಿದೆ. ಅಲ್ಲದೆ ಕೆಲವು ಹಿರಿಯ ವ್ಯಂಗ್ಯ ಚಿತ್ರಕಾರ ಬಗ್ಗೆ ಹೇಳಲಾಗಿದೆ. ಪ್ರಸಿದ್ಧಿಗೆ ಹೋಗದೆ ಕನ್ನಡ ಜನನ ಸೇವೆ ಮಾಡುತ್ತಿರುವರು ಇಂದಿಗೆ ದೈನಿಕ ವಾರ್ತಾಪತ್ರಿಕೆಗಳಲ್ಲಾಗಲಿ, ನಿಯತಕಾಲಿಕೆ ಹೊತ್ತಿಗೆಗಳಲ್ಲಾಗಲಿ, ಪ್ರಕಟಿತ ಗ್ರಂಥಗಳಲ್ಲಾಗಲಿ, ಜಾಹಿರಾತುಗಳಲ್ಲಾಗಲಿ ವ್ಯಂಗ್ಯ ಚಿತ್ರಕಾರರಲ್ಲೂ ಬಹಳ ಬೇಡಿಕೆ ಇರುವುದೆಂದು ಹೇಳಲಾಗಿದೆ. ವ್ಯಂಗ್ಯ ಚಿತ್ರಕಾರರು ತಾವು ರಚಿಸುವ ವ್ಯಂಗ್ಯಚಿತ್ರಗಳ ವಸ್ತುವಿಷಯಕಾರರ ಚಿತ್ರಗಳು ವಿವಿಧ ದೃಷ್ಟಿಕೋನಗಳ ಬಗ್ಗೆಯೂ ಹೇಳಲಾಗಿದೆ.

ವ್ಯಂಗ್ಯಚಿತ್ರ ಪತ್ರಿಕೆಗಳಲ್ಲದೆ ಚಿತ್ರಕಥೆಗಳಿಂದ ಜನರಿಗೆ ಪ್ರೇರಾಣೇತಿಹಾಸಗಳಲ್ಲಿ ಅಭಿರುಚಿ ಹುಟ್ಟಿಸಿದ್ದನ್ನೂ ಇಲ್ಲಿ ನೆನೆಯಬಹುದಾಗಿದೆ.

ಮೂರ್ತಿಯವರು ಬೆಂಗಳೂರು ಮುದ್ರನಾಲಯಕ್ಕೆ ಬಿಟ್ಟು ೧೨೦ ವ್ಯಂಗ್ಯಚಿತ್ರಗಳನ್ನು ನೀಡಿದ್ದಾರೆ. ಅವರು ರಚಿಸಿರುವ ವ್ಯಂಗ್ಯಚಿತ್ರಗಳನ್ನು ಈ ಪುಸ್ತಕದಲ್ಲಿ ನೋಡಬಹುದಾಗಿದೆ. ವ್ಯಂಗ್ಯಚಿತ್ರಗಳ ವಿವರಣೆಯ ಆ ಚಿತ್ರಗಳ ಕೆಳಗೆ ಸಂದರ್ಭಗಳ ಹಾಗೂ ವಿಷಯಗಳ ಬಗ್ಗೆ ವಿವರಿಸಲಾಗಿದೆ.

**ವ್ಯಂಗ್ಯ ರಂಗ**

ಈ ಪುಸ್ತಕವನ್ನು ನಾಗೇಂದ್ರಯಲ್ಲಾಪುರ ಅವರು ಸಂಪಾದಕರು. ಕರ್ನಾಟಕದ ವ್ಯಂಗ್ಯ ಚಿತ್ರಕಾರರ ಕುರಿತು ಬಿಟ್ಟರೆ ಮಾಹಿತಿಯನ್ನು ಈ ಪುಸ್ತಕದಲ್ಲಿ ಚರ್ಚಿಸಲಾಗಿದೆ. ಅಲ್ಲದೆ ತಾವುಗಳು ರಚಿಸಿದ ಚಿತ್ರಗಳ ಸಹಿತವಾಗಿ ವ್ಯಂಗ್ಯಚಿತ್ರಕಾರರ ಪರಿಚಯವನ್ನು ನಾವು ನೋಡಬಹುದಾಗಿದೆ. ಈ ಪುಸ್ತಕದಲ್ಲಿ ೪೫ ಜನ ವ್ಯಂಗ್ಯಚಿತ್ರಕಾರರ ವಿಳಾಸಯನ್ನು ಈ ಪುಸ್ತಕದಲ್ಲಿ ದಾಖಲಿಸಲಾಗಿದೆ.

**ಆಟೂರ್ನ್**

ಈ ಪುಸ್ತಕವನ್ನು ಡಾ. ಸತೀಶ್ ಶೃಂಗೇರಿಯವರು ಮತ್ತು ರಘುಪತಿ ಶೃಂಗೇರಿಯವರ ಜೊತೆಯಾಗಿ ಬರೆದಿದ್ದಾರೆ. ವ್ಯಂಗ್ಯಚಿತ್ರಕಲೆ ಹುಟ್ಟು ಮತ್ತು ಇತಿಹಾಸದ ಬಗ್ಗೆ ಸ್ಥೂಲವಾಗಿ ಇಲ್ಲಿ ಹೇಳಲಾಗಿದೆ. ಅಲ್ಲದೆ ವ್ಯಂಗ್ಯಚಿತ್ರಕಲೆಯ ಮಹತ್ವವನ್ನು ಕುರಿತು ಹೇಳಲಾಗಿದೆ. ಅಲ್ಲದೆ ವ್ಯಂಗ್ಯಚಿತ್ರ ರಚನೆಗೆ ಬೇಕಾಗುವ ಕೆಲವು ಸಲಹೆಗಳನ್ನು ನೀಡಲಾಗಿದೆ. ವ್ಯಂಗ್ಯ ಚಿತ್ರಾಭ್ಯಾಸದ ಹಂತಗಳ ಬಗ್ಗೆ ತಿಳಿಸಲಾಗಿದೆ. ವೇಷ-ಭೂಷಣಗಳ ಬಗ್ಗೆ, ಭಾವ ಭಂಗಿಗಳು, ಹಿನ್ನೆಲೆ ಸನ್ನಿವೇಶಗಳ ಬಗ್ಗೆ ತಿಳಿಸಲಾಗಿದೆ. ಅಲ್ಲದೆ ವ್ಯಂಗ್ಯ ಭಾವಚಿತ್ರಗಳ (ಕ್ಯಾರಿಕೇಟರ್) ರಚನೆಯ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡಲಾಗಿದೆ. ನಮ್ಮ ಭಾರತದಲ್ಲಿನ ವ್ಯಂಗ್ಯಚಿತ್ರಕಲಾವಿದ ರಚಿಸುವ ವ್ಯಂಗ್ಯಚಿತ್ರಗಳ ಸ್ವಾತಂತ್ರ್ಯದ ಬಗ್ಗೆಯೂ ವಿವರಣೆಯಿದೆ.

**ವ್ಯಂಗ್ಯಚಿತ್ರ ವಿಶ್ವರೂಪ**

ಇದನ್ನು ಬರೆದವರು ಚ.ಹ. ರಘುನಾಥ್‌ನವರು ಇದನ್ನು ಕಿರಣ್ ಬುಕ್ಸ್‌ರವರದು ಈ ಪುಸ್ತಕವನ್ನು ಬಿ.ವಿ. ರಾಮಮೂರ್ತಿಯವರಿಗೆ ಅರ್ಪಣೆ ಮಾಡಲಾಗಿದೆ. ಕನ್ನಡ ಪತ್ರಿಕಾ ರಂಗದಲ್ಲಿ ತಮ್ಮದೇ ಆದ ವಿಶಿಷ್ಟ ವ್ಯಂಗ್ಯಗೆರೆಗಳಿಂದ ವ್ಯಂಗ್ಯ ಚಿತ್ರ ಕಲೆಗೆ ಗಟ್ಟಿ ತಳಪಾಯ ಹಾಕಿದವರು ಬಿ.ಬಿ. ರಾಮಮೂರ್ತಿರವರ ವ್ಯಂಗ್ಯಚಿತ್ರ ರಚನಾ ಕೌಶಲ್ಯದ ಜಾದೂಗಾರ ಕನ್ನಡ ಪತ್ರಿಕೋದ್ಯಮದಲ್ಲಿ ವ್ಯಂಗ್ಯಚಿತ್ರಕಾರರಿಗೆ ಮಾನ್ಯತೆ ದೊರಕುವಂತೆ ಮಾಡಿದವರು ಈ ಪುಸ್ತಕದಲ್ಲಿ ಬಿ.ವಿ. ರಾಮಮೂರ್ತಿಯವರ ಜನಪದ ಬಗ್ಗೆ ಅಲ್ಲದೆ ಇವರ ಶಿಕ್ಷಣದ ಒಟ್ಟು ಮಾಹಿತಿಯನ್ನು ಈ ಪುಸ್ತಕದಲ್ಲಿ ನೋಡಬಹುದಾಗಿದೆ. ಅಲ್ಲದೆ ಕೊರವಂಜಿ ಪತ್ರಿಗಳಲ್ಲಿ ವ್ಯಂಗ್ಯಚಿತ್ರ ರಚನೆ ಆರಂಭ ಮತ್ತು ಅವರ ವೃತ್ತಿ ಜೀವನದಲ್ಲಿ ಪತ್ರಿಕೆಗಳಿಗೆ ವ್ಯಂಗ್ಯ ಚಿತ್ರಕಾರರಾಗಿ ಸೇರಿದರ ಬಗ್ಗೆ ಒಟ್ಟು ಮಾಹಿತಿಯನ್ನು ಕೊಡಲಾಗಿದೆ. ಅಲ್ಲದೆ ಇವರಿಗೆ ಲಭಿಸಿದ ಪ್ರಶಸ್ತಿ ಹಾಗೂ ಗೌರವಗಳ ಬಗ್ಗೆ.

## ವ್ಯಂಗ್ಯಗಿರಿ

ಈ ಪುಸ್ತಕದಲ್ಲಿ ವಿ.ಆರ್. ಶೇಖರ್‌ರವರ ವ್ಯಂಗ್ಯ ಚಿತ್ರಗಳ ಸಂಕಲನವನ್ನು ವಿ.ಆರ್.ಸಿರವರ ಬಾಲ್ಯ, ಜೀವನ ಮತ್ತು ಬದುಕಿನ ಬಗ್ಗೆ ವಿಸ್ತಾರವಾಗಿ ತಿಳಿದುಕೊಳ್ಳಬಹುದಾಗಿದೆ. ಅಲ್ಲದೆ ಇವರು ಪಡೆದಂತಹ ಶಿಕ್ಷಣದ ಬಗ್ಗೆಯು ಸಹ ಒಟ್ಟಾರೆಯಾಗಿ ಹೇಳಲಾಗಿದೆ. ಅಲ್ಲದೆ ವಿ.ಆರ್.ಸಿರವರ ಕನ್ನಡ ಪತ್ರಿಕೆಗಳಲ್ಲಿ ನಿರಂತರವಾಗಿ ವ್ಯಂಗ್ಯಚಿತ್ರಗಳ ಪ್ರಕಟವಾಗುತ್ತಿರುವುದರಿಂದ ಕೆಲವು ಪತ್ರಿಕೆಗಳ ಬಗ್ಗೆ ಮಾಹಿತಿಯನ್ನು ಹೇಳಲಾಗಿದೆ. ಅಲ್ಲದೆ ಇವರ ಚಿತ್ರ ಪ್ರದರ್ಶನದ ಬಗ್ಗೆಯು ಸಹ ಕೆಲವು ಮಾಹಿತಿಗಳನ್ನು ಸಿಗುತ್ತವೆ. ಇವರು ೧೦ಕ್ಕೂ ಹೆಚ್ಚು ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನದ ಬಗ್ಗೆ ಸಹ ಹೇಳಲಾಗಿದೆ. ಇವರ ವೃತ್ತಿಯ ಬಗ್ಗೆ ಬಂದ ಸನ್ಮಾನಗಳ ಬಗ್ಗೆಯು ಹೆಚ್ಚಿನ ಮಾಹಿತಿಯಿದೆ. ಇವರ ಗುರುಗಳಾದ ಎಂ.ಟಿ.ವಿ ಆಚಾರ್ಯರರ ಬಳಿ ಶಿಷ್ಯವೃತ್ತಿ ಕೈಗೊಂಡಿದ್ದರ ಬಗ್ಗೆಯು ಹೇಳಲಾಗಿದೆ. ನಾವ್ಯಾರೂ ಮಾಡಿದ್ದನ್ನು ಮಾಡುವುದೇ ಕಲೆ ಅನ್ನದೆ 'ನಾವೆಲ್ಲರೂ ಗಮನಿಸದೇ ಹೋದ, ಆದರ ಗಮನಿಸಬಹುದಾಗಿದ್ದ ಜನಗತ್ತು ನನ್ನ ವ್ಯಂಗ್ಯಚಿತ್ರ ಜಗತ್ತು' ಎಂದು ವಿ.ಆರ್.ಸಿಯವರು ತಮ್ಮ ನಾಲ್ಕು ದಶಕಗಳ ಚಿತ್ರಗಳ ಮುಖೇನ ಹೇಳುತ್ತಿದ್ದಾರೆ. ಅಲ್ಲದೆ ಅವರು ರಚಿಸಿದಂತಹ ಕೆಲವು ಸಾಮಾಜಿಕ, ರಾಜಕೀಯ, ಮತ್ತು ಹಾಸ್ಯಪ್ರಧಾನ ಚಿತ್ರಗಳನ್ನು ಪುಸ್ತಕ ಸಂಗ್ರಹದಲ್ಲಿದೆ.

THE TIMES OF INDIA ಹೊರತಂದಿರುವ LAXMAN REKHA ಎಂಬ ಪುಸ್ತಕವನ್ನು ಆರ್.ಕೆ. ಲಕ್ಷ್ಮಣ್‌ರವರ ಹುಟ್ಟು ಹಬ್ಬದ ಸುಭಾಷೆಗಾಗಿ ಇವರು ರಚಿಸಿದಂತಹ ಕೆಲವು ವ್ಯಂಗ್ಯಚಿತ್ರಗಳ ಸಂಗ್ರಹವಿದೆ.

ಈ ಪುಸ್ತಕದಲ್ಲಿ ಸಾಮಾಜಿಕ, ರಾಜಕೀಯ ಹಾಗೂ ಹಾಸ್ಯ ಪ್ರಧಾನಕ್ಕೆ ಸಂಬಂಧಿಸಿದಂತಹ ವ್ಯಂಗ್ಯಚಿತ್ರಗಳನ್ನು ಇಲ್ಲಿ ಅಧ್ಯಯನ ಮಾಡಬಹುದಾಗಿದೆ.

## MR. CITIZEN

ಇದನ್ನು ಬೆಂಗಳೂರು ಪ್ರಿಂಟರ್ಸ್‌ರವರು ಹೊರತಂದಿದ್ದಾರೆ. ಹಿರಿಯ ಹಾಗೂ ಖ್ಯಾತ ಕಲಾವಿದರಾದ ಮೂರ್ತಿರವರ ರಾಜಕೀಯ, ಸಾಮಾಜಿಕ ಹಾಗೂ ಹಾಸ್ಯಕ್ಕೆ ಸಂಬಂಧಿಸಿದಂತಹ ವ್ಯಂಗ್ಯಚಿತ್ರಗಳನ್ನು ನಾವು ವೀಕ್ಷಿಸಬಹುದಾಗಿದೆ.

* * *

## ಅಧ್ಯಾಯ : ಆರು

# ವ್ಯಂಗ್ಯ ಚಿತ್ರಕಲಾವಿದರು ಮತ್ತು ಅವರ ಸ್ಥಿತಿ-ಗತಿ



ಕಲಾವಿದನನ್ನು ವಿಶೇಷ ವ್ಯಕ್ತಿ ಎಂದು ತಿಳಿಯದೇ ಹೋದರೂ ಅವನ ಸ್ವಭಾವ, ಮಾನಸಿಕ ಪ್ರವೃತ್ತಿ, ಗುಣ ಅವನ ಸೌಂದರ್ಯ ಗುಣಗ್ರಹಣದ ಬಗೆಗಿನ ತೀವ್ರತೆ ಹಾಗೂ ಸಂವೇದನ ಶೀಲತೆಯನ್ನು ಬೆಳೆಸಿಕೆಂಡು ಬರಲು ಅವನಿಗೆ ವಿಶೇಷವಾದ ಉಪಚಾರ ಹಾಗೂ ಪರಿಸರವನ್ನು ಒದಗಿಸುವ ಬಗ್ಗೆ ಕಾಳದಿ ವಹಿಸಬೇಕಾಗುತ್ತದೆ. ಕಲೆ ಹುಟ್ಟಿನಿಂದ ಬರುವಂತಹದು ಎಂದು ಬಹುಜನರು ಹೇಳುತ್ತಾರೆ. ಆದರೆ ಹುಟ್ಟಿನಿಂದಲೇ ಕಲಾವಿದರಾಗಿರವವರು ವಿರಳ. ಒಳ್ಳೆ ಪರಿಸರ ಒಬ್ಬ ಒಳ್ಳೆ ಕಲಾವಿದನನ್ನು ಸೃಷ್ಟಿಸಬಹುದು ಎಂಬುದನ್ನು ಅನೇಕರು ಒಪ್ಪುತ್ತಾರೆ. ಪರಿಸರದಲ್ಲಿ ಬೆಳೆದ ಕಲಾವಿದರಾದವನೇ ಬಹಳಷ್ಟು ಜನ ಹುಟ್ಟುಕಲಾವಿದರು ಅಸಾಧಾರಣ ಬುದ್ಧಿಶಕ್ತಿಹೊಂದಿದ್ದು, ಪ್ರತಿಭಾವಂತರಾಗಿರುತ್ತಾರೆ. ಸೂಕ್ಷ್ಮ ಮನಸ್ಸಿನ ಶೀಘ್ರುಗ್ರಾಹಿಗಳಾಗಿರುತ್ತಾರೆ. ಮಾನಸಿಕ ಉದ್ವೇಗ ಆವೇಗ ಹಾಗೂ ಕಳವಳದ ಭಾವದ ವಿಲಕ್ಷಣವಾದ ಹುಚ್ಚು ಸ್ವಭಾದಿಂದ ಕೂಡಿದವರಾಗಿತ್ತಾರೆ. ಅಲ್ಲದೇ ಅದ್ಭುತವಾದ ಅಂತರ್‌ದೃಷ್ಟಿ, ಅಂತಃಸ್ಫೂರ್ತಿ ಹಾಗೂ ಒಳ ಅರಿವನ್ನು ಹೊಂದಿದವರಾಗಿರುತ್ತಾರೆ. ಅವರಿಗೆ ಊಹಾತ್ಮಕ ಕಲ್ಪನಾಶಕ್ತಿ, ಭಾವನಾಶಕ್ತಿ ಯೋಜನಾಶಕ್ತಿ ತರ್ಕಶಕ್ತಿ ಇವೆಲ್ಲಾ ಮೈಗೂಡಿಕೊಂಡಿರುತ್ತವೆ. ಈ ಕಾರಣಕ್ಕಾಗಿ ಹುಟ್ಟುಕಲಾವಿದ ಎಲ್ಲಿಲ್ಲದ ಸೃಜಶೀಲತೆಯನ್ನು ಹೊಂದಿರುತ್ತಾನೆ. ಸ್ವಂತಿಕೆಯನ್ನು ಪಡೆದವನಾಗಿರುತ್ತಾನೆ.[೧] ಅಂತೆಯೇ ಕೆಲವು ವ್ಯಂಗ್ಯಚಿತ್ರಕಲಾವಿದರು ಕಲಾ ಶಿಕ್ಷಣದಲ್ಲಿಯೇ ಓದಿ ತಮ್ಮನ್ನು ತಾವು ಈ ಕ್ಷೇತ್ರದ ಆಯ್ಕೆಯನ್ನು ಮಾಡಿಕೊಂಡಿದ್ದಾರೆ. ಇನ್ನೂ ಕೆಲವು ವ್ಯಂಗ್ಯಚಿತ್ರಕಾರರು ಕೆಲವಾರು ಓದಿಗೂ ಈ ವ್ಯಂಗ್ಯಚಿತ್ರದ ಜಗತ್ತನ್ನೆ ಗೊತ್ತಿಲ್ಲದವರು ಸಹ ತಮ್ಮ ಅಭ್ಯಾಸಬಲದಿಂದ ಈ ಕ್ಷೇತ್ರದಲ್ಲಿ ತಮ್ಮ ತಾವು ತೊಡಗಿಸಿಕೊಂಡು ವ್ಯಂಗ್ಯಚಿತ್ರ ಕಲಾ ಲೋಕವನ್ನು ಸೃಷ್ಟಿಸಿ ಇದನ್ನು ಉಳಿಸಿ ಬೆಳಸಿಕೊಂಡು ಹೋಗುತ್ತಿದ್ದಾರೆ. ಅಲ್ಲದೆ ಈ ಕ್ಷೇತ್ರಕ್ಕೆ ಪುರುಷರಷ್ಟೇ ಸೀಮಿತವಾಗಿಲ್ಲ. ಮಹಿಳಾ ವ್ಯಂಗ್ಯಚಿತ್ರಕಲಾವಿದ-ದೆಯರು ಸಹಾ ಈ ಕ್ಷೇತ್ರಕ್ಕೆ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಇದರಲ್ಲಿ ಕೆಲವಾರು ಹವ್ಯಾಸಿ ಕಲಾವಿದರು ಕೆಲವಾರು ಶಿಕ್ಷಣವು ಕಲೆಯದ್ದೆ ವೃತ್ತಿಯು ಕಲೆಯದ್ದೆಯಾಗಿದೆ.

ಸತ್ತ ಮಾನವ ಶರೀರವು ವೈದ್ಯಕೀಯ ವಿದ್ಯಾರ್ಥಿಗಲಿಗೆ ಅಧ್ಯಯನಕ್ಕೆ ಉಪಯೋಗವಾಗುವಂತೆ ಜೀವಂತ ಮಾನವ ಶರೀರವು ಕಲಾವಿದನ ಅಧ್ಯಯನಕ್ಕೆ ಪ್ರಯೋಜನಕಾರಿಯಾಗುತ್ತದೆ. ಹೂವು ಕೆಲಕಾಲದಲ್ಲಿ ಬಾಡಿ ಹೋಗುತ್ತದೆ. ಯೌವ್ವನ ಮುಪ್ಪಾಗಿ ಹೋಗುವಂತೆ, ಆದರೆ ಕಲಾವಿದನ ಕಲಾಕೃತಿಯಲ್ಲಿ ಹೂವು ಬಾಡುವುದಿಲ್ಲ.

ಅಡಿಟಿಪ್ಪಣಿಗಳು

೦೧. ಶಂಕರ್ ಪಾಟೀಲ : ಚಿತ್ರಾಂತರಂಗ ; ಪುಟ ಸಂಖ್ಯೆ-೧೧೯

ಯೌವ್ವನ ಎಂದು ಮುಪ್ಪನ್ನು ಕಾಣುವುದೇ ಇಲ್ಲ. ಚಿತ್ರದಲ್ಲಿ ಯುವತಿಯು ಸೌಂದರ್ಯದ ಕ್ಷಣಗಳು ಚಿರಾಯುವಾಗಿ ಹಾಗೇ ಉಳಿದುಬಿಡುತ್ತವೆ. ಆದ್ದರಿಂದ ಸಮಯವನ್ನು ಘನೀಕರಿಸಿ ನಿಲ್ಲಿಸುವ ಗಣನೀಯವಾದ ಗುಣ ಚಿತ್ರಕಲೆಯಲ್ಲಿ ಇರುವುದನ್ನು ನಾವು ಗಮನಿಸಬಹುದಾಗಿದೆ. ಅದೇ ಅದರ ಹೆಚ್ಚಳ. ಅದರಾಗೇ ಚಿತ್ರಕಲೆ ಎಲ್ಲ ಕಲೆಗಳಿಗಿಂತ ವಿಶಿಷ್ಟ ಹಾಗೂ ಶ್ರೇಷ್ಠ ಎನಿಸಿಕೊಂಡಿರುವುದು.[೨]

ನಮ್ಮ ವ್ಯಂಗ್ಯ ಚಿತ್ರಕಲೆಗೆ ತನ್ನದೇಯಾದ ಸ್ಥಾನಮಾನವನ್ನು ಉಳಿಸಿಕೊಂಡಿದೆ. ವ್ಯಂಗ್ಯಚಿತ್ರ ಪ್ರಕಾರವು ಒಂದು ಸಶಕ್ತವಾದ ಮಾಧ್ಯಮವೆಂಬುದರಲ್ಲಿ ಯಾವ ಸಂಶಯವು ಇಲ್ಲ. ನಮ್ಮ ಕರ್ನಾಟಕದಲ್ಲಿ ರೂಪುಗೊಳ್ಳುತ್ತಿರುವ ಕೋಮುವಾದ ವಿರೋಧಿ ಚಿಂತನೆ ಜಾತ್ಯತೀತ ನೋಟ ವೈಚಾರಿಕ ಪ್ರಜ್ಞೆ ಹಾಗೂ ದಿನನಿತ್ಯದ ಸಾಮಾಜಿಕ ಹಾಗೂ ರಾಜಕೀಯ ವಿಮರ್ಶೆಗೆ ನಿರಂತರ ಒಳನೋಟಗಳು ಹಾಗೂ ಕ್ರಿ.ಪೂ. ವ್ಯಾಖ್ಯಾನಗಳು ಕೊಡುತ್ತಿರುವ ನಮ್ಮ ವ್ಯಂಗ್ಯಚಿತ್ರಕಲಾವಿದರು ತಾವು ರಚಿಸುತ್ತಿರುವ ವ್ಯಂಗ್ಯಚಿತ್ರಗಳು ಕರ್ನಾಟಕ ಸಂಸ್ಕೃತಿಗೆ ಅಮೂಲ್ಯವಾದ ಕೊಡುಗೆಗಳಾಗಿ ಎಲ್ಲಕ್ಕಿಂತ ಮುಖ್ಯವಾಗಿ ನಿಸ್ವಾರ್ಥದಿಂದ ಸುತ್ತಲಿನ ವಿದ್ಯಮಾನಗಳನ್ನು ಗಮನಿಸುತ್ತಾ ತೀಕ್ಷ್ಣವಾಗಿ ಪ್ರತಿಕ್ರಿಯಿಸುವ ನಮ್ಮ ವ್ಯಂಗ್ಯಚಿತ್ರಕಲಾವಿದರ ವ್ಯವಸ್ಥೆಯ ವಿರೋಧದ ಗುಣ ಹಾಗೂ ಪ್ರಾಮಾಣಿಕತೆ ನಮ್ಮಲ್ಲಿ ಸದಾ ಉಳಿಯುತ್ತದೆ. ಕ್ರಿಯಾಶಾಲಿ ಬುದ್ಧಿಜೀವಿಯೊಬ್ಬ ಎಲ್ಲ ವಿದ್ಯಮಾನಗಳನ್ನು ಗಮನಿಸುತ್ತ ಕ್ಷಣಕ್ಷಣಕ್ಕೂ ಪ್ರತಿಕ್ರಿಯಿಸುತ್ತಿರುವ ನಮ್ಮ ವ್ಯಂಗ್ಯಚಿತ್ರ ಕಲಾವಿದರ ವ್ಯಂಗ್ಯ ಚಿತ್ರಗಳು ಪತ್ರಿಕೆಗಳ ಪುಟಗಳಿಗೆ ಸ್ಥಳಭರ್ತಿ ಅಥವಾ ವಿನ್ಯಾಸ ಅಂದರೆ, ''ಲೇಔಟ್'' ಅನುಕೂಲಕ್ಕಾಗಿಯೇ ಉಪಯೋಗಿಸುವಂಥ ಒಂದು ಮಾಧ್ಯಮ ಎಂಬಂತೆ ಮೊದಲ ನೋಟಕ್ಕೆ ಕಾಣಿಸಿದ್ದರೂ, ಉತ್ತಮ ವ್ಯಂಗ್ಯಚಿತ್ರಗಳು ಅನೇಕ ಕಾರಣಗಲಿಗಾಗಿ ಬರಿ ಸ್ಪೇಸ್ ಫಿಲ್ಲರ್ ಆಗದೆ, ಓದುಗರ ಮನಸ್ಸನ್ನು ತಲುಪಿ ಅವರನ್ನು ಉಲ್ಲಾಸಗೊಳಿಸುವ ಹಾಗೆ, ಚಿಂತಿಸುವ ಹಾಗೆ ಮಾಡುವ ಕ್ರಿಯಾಶೀಲ ಸೃಷ್ಟಿಯಾಗಿರುತ್ತದೆ.

ನಗೆಹನಿಗಳನ್ನು ಅಂಕುಡೊಂಕು ರೇಖಾಚಿತ್ರಗಳಲ್ಲಿ ಕಾಣಿಸಿ ಚೋಕನ್ನು ಗೆರೆಗಳಿಗೆ ವರ್ಗಾಹಿಸಿಬಿಟ್ಟರೆ ವ್ಯಂಗ್ಯಚಿತ್ರವಾಗಿಬಿಡುತ್ತದೆ ಎಂದು ಬಹಳ ಜನ ಭಾವಿಸಿಕೊಂಡಿದ್ದಾರೆ. ಸುಪ್ರಸಿದ್ಧ ದಿನಪತ್ರಿಕೆ ವ್ಯಂಗ್ಯಚಿತ್ರಕಾರರೆಲ್ಲ ಅಂದಂದಿನ 'ಹೆಡ್‌ಲೈನ್'ಗೆ ಮೊದಲು ತಾವು ಒಂದು ವ್ಯಂಗ್ಯಚಿತ್ರ ರಚಿಸಲು ಪಡುವ ಸಂಕಟ ಚಿಂತೆ ಒತ್ತಡ ಸಂತೋಷಗಳನ್ನು ಪ್ರಸವವೇದನೆ ಎಂದು ಹೇಳುವುದನ್ನು ನೋಡಿದರೆ ವ್ಯಂಗ್ಯಚಿತ್ರರಚನೆ ನಿಜವಾಗಲೂ ಸರಳವಾದ, ಸುಲಭವಾದ ಕೆಲಸವಲ್ಲ ಎಂದರ್ಥವಾಗುತ್ತದೆ. ವ್ಯಂಗ್ಯಚಿತ್ರ ಸೃಷ್ಟಿ ಎನ್ನುವುದು ಪರಿಣತ ವ್ಯಕ್ತಿಯೊಬ್ಬ ಮಾಡುವ ಪರಿಣತ ಕೆಲಸ ಚಿತ್ರರಚನೆಯಲ್ಲಿ ಪರಿಪೂರ್ಣತೆ, ಬದುಕಿನ ಆಗುಹೋಗುಗಳ ತಿಳುವಳಿಕೆ, ಸಾರ್ವಜನಿಕ ಘಟನಾವಳಿಗಳ ಅರ್ಥವಂತಿಕೆ ಇದನ್ನೆಲ್ಲ ಬಹಳ ಚೆನ್ನಾಗಿ ತಿಳಿದಿರುವವರ ಕ್ರಿಯೇಟಿವ್ ಕೆಲಸಾಗಿದೆ. ಇಂತಹ 'ಕ್ರಿಯೇಟಿವ್'ವಾಗಿ ನಮ್ಮ ವ್ಯಂಗ್ಯಚಿತ್ರ ಕಲಾವಿದರು ದಿನಾಲು ಮಾಧ್ಯಮಗಳಿಗೆ ಚಿತ್ರಗಳನ್ನು ರಚಿಸಿಕಳಿಸುತ್ತಾರೆ. ಅಂತಹ ಕಲಾವಿದರ ಕಿರುಪರಿಚಯವನ್ನು ಇಲ್ಲಿ ನೋಡಬಹುದಾಗಿದೆ. ನಮ್ಮ ಕರ್ನಾಟಕ ಹಲವು ಜಿಲ್ಲೆ ತಾಲೂಕ್‌ಗಳಲ್ಲಿ ಹಾಗೂ ಕೆಲವಾರು ಚಿಕ್ಕಪುಟ್ಟ ಹಳ್ಳಿಗಳಿಂದ ಬಂದ ಅನೇಕ ಕಲಾವಿದರು ಈ ವೃತ್ತಿಯಲ್ಲಿ ಹಾಗೂ ಹವ್ಯಾಸದಲ್ಲಿ ತೊಡಗಿದ್ದಾರೆ.

೦೨. ಶಂಕರ್ ಪಾಟೀಲ : ಚಿತ್ರಾಂತರಂಗ ; ಪುಟ ಸಂಖ್ಯೆ-೭೯

## ಪರಿಚಯ

**ಕುಮುದಾ ದೇಶಪಾಂಡೆ**

ಮನೆಯಲ್ಲಿ ತಂದೆ, ಚಿಕ್ಕಪ್ಪ, ಸಹೋದರ ಸಹೋದರಿಯರು ಹೀಗೆ ಎಲ್ಲರಿಗೂ ಕಲೆ, ಚಿತ್ರಕಲೆ ಹವ್ಯಾಸಗಳು. ಹುಟ್ಟೂರು ಗದಗ ಜಿಲ್ಲೆಯ ಶಿರಹಟ್ಟಿ ತಾಯ್ತಂದೆಯ ಹತ್ತು ಜನ ಮಕ್ಕಳಲ್ಲಿ ಒಂಬತ್ತನೆಯವಳು. ಶಾಲಾ-ಕಾಲೇಜುಗಳಲ್ಲಿ ಚಿತ್ರಕಲೆಗೆ ಬಹುಮಾನ ಪಡೆದಿರುವೆ. ಬಾಲ್ಯದಲ್ಲಿ ವ್ಯಂಗ್ಯಚಿತ್ರದಲ್ಲಿ ಆಸಕ್ತಿ ಮೂಡಿತು. ಮೊದಲ ವ್ಯಂಗ್ಯಚಿತ್ರ ಸಂಯುಕ್ತ ಕರ್ನಾಟಕದಲ್ಲಿ ೨೭.೬.೧೯೮೨ರಂದು ಪ್ರಕಟವಾಯಿತು. ನಂತರ ಮತ್ತೆ ಪ್ರಟವಾಗತೊಡಗಿದವು. ಮನೆಯಲ್ಲಿ ಎಲ್ಲರು ನೋಡಿ, ಪ್ರೋತ್ಸಾಹಿಸಿ ವ್ಯಂಗ್ಯಚಿತ್ರಕ್ಕೆ ವಿಷಯ ಹೇಳತೊಡಗಿದರು. ಹೀಗೆ ವ್ಯಂಗ್ಯಚಿತ್ರಕಲೆ ನನ್ನ ಹವ್ಯಾಸ, ಬಿಡುವಿನ ವೇಲೆಯ ಸದುಪಯೋಗವಾಗತೊಡಗಿತು.

ಕರ್ಮವೀರ, ಕಸ್ತೂರಿ, ಮಲ್ಲಿಗೆ, ಸಮಾಚಾರ, ಸುಧಾ, ತರಂಗ, ಪ್ರಜಾವಾಣಿ, ಭಾವನಾ, ವನಿತಾ, ಮೊಗವೀರ, ಅಭ್ಯುದಯ ಮೊದಲಾದ ಕನ್ನಡದ ಎಲ್ಲ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿವೆ.

'ಭಾವನಾ' ಪತ್ರಿಕೆಯ ಯುಗಾದಿ ವಿಶೇಷಾಂಕ ೨೦೦೧ರಲ್ಲಿ ವ್ಯಂಗ್ಯಚಿತ್ರ ಸ್ಪರ್ಧೆಗೆ ವಿಶೇಷ ಬಹುಮಾನ ದೊರೆತಿದೆ.

ಗ್ರೀಸ್ ರೋಮೇನಿಯಾ ಮೊದಲಾದ ಅಂತರಾಷ್ಟ್ರೀಯ ಪ್ರದರ್ಶನಳಿಗೂ ವ್ಯಂಗ್ಯಚಿತ್ರ ಕಳಿಸುತ್ತಿದ್ದೇನೆ ಕನ್ನಡ ಸಮ್ಮೇಳನಗಳಲ್ಲೂ ಇತರರೊಂದಿಗೆ ನನ್ನ ವ್ಯಂಗ್ಯಚಿತ್ರಗಳು ಪ್ರದರ್ಶಿಸಲ್ಪಟ್ಟಿವೆ.

'ವಿಜಯ ನೆಕ್ಸ್ಟ್' ಪತ್ರಿಕೆ ಕರ್ನಾಟಕದ ಮೂವರು ವ್ಯಂಗ್ಯಚಿತ್ರಕಾರ್ತಿಯರಲ್ಲಿ ಒಬ್ಬಳೆಂದು ಪರಿಚಯಿಸಿದೆ.

ಬೆಂಗಳೂರಿನ 'ಕರ್ನಾಟಕ ವ್ಯಂಗ್ಯಚಿತ್ರಕಾರರ ಸಂಘದ' ಆಜೀವ ಸದಸ್ಯಳಿದ್ದು ಅವರಿಂದ ದೇಶದೆಲ್ಲೆಡೆ ಪ್ರದರ್ಶನಗಳಲ್ಲಿ ನನ್ನ ವ್ಯಂಗ್ಯಚಿತ್ರಗಳು ಪ್ರದರ್ಶಿಸಲ್ಪಟ್ಟಿವೆ.

ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದ ಪತ್ರಿಕೋದ್ಯಮ ವಿಭಾಗ ಹಾಗೂ ಕರ್ನಾಟಕ ವ್ಯಂಗ್ಯಚಿತ್ರಕಾರರ ಸಂಘ ಬೆಂಗಳೂರು ಅವರು ನಡೆಸಿದ ಮೂರು ದಿನದ ಪ್ರದರ್ಶನ ಸ್ವಾತಂತ್ರ್ಯದ ಸುವರ್ಣಮಹೋತ್ಸವದ ಸಂದರ್ಭದಲ್ಲಿ ನನ್ನವು ಮೆಚ್ಚುಗೆಗಳಿಸಿದವು. ಕರಿ ಬಟ್ಟೆಯ ಮೆಲೆ ದೊಡ್ಡ ಡ್ರಾಯಿಂಗ್ ಸೀಟುಗಳಲ್ಲಿ ರಚಿಸಿದ ವ್ಯಂಗ್ಯಚಿತ್ರಗಳು ಎಲ್ಲರ ಆಕರ್ಷಣೆಯ ಕೆಂದ್ರಬಿಂದುವಾದವು.

ಸುಮಾರು ೫೦೦ ವ್ಯಂಗ್ಯಚಿತ್ರಗಳನ್ನು ರಚಿಸಿರುವೆ. ಓದುಗರು ಪತ್ರಿಕೆಯನ್ನು ಕೈಗೆತ್ತಿಕೊಂಡಾಗ ಮೊದಲು ನೋಡುವದು ಮನಕ್ಕೆ ಮುದನೀಡುವ ವ್ಯಂಗ್ಯಚಿತ್ರಗಳನ್ನು ಕೆಲವೇ ಗೆರೆಗಳಲ್ಲಿ ಹಲವಾರು ವಿಷಯಗಳನ್ನು ಓರೆ-ಕೋರೆಗಳಲ್ಲಿ ವ್ಯಂಗ್ಯಚಿತ್ರವಾಗಿಸಿ ನಗು, ಮನರಂಜನೆ, ವಿಚಾರ ಮಾಡಲು ಹಚ್ಚುವದು, ವಿಷಯ ತಿಳಿಸುವದು, ಸಮಾಜ ತಿದ್ದುವ ಕೆಲಸ ಮಾಡಬಹುದು. ಆದ್ದರಿಂದ ಇದು ನನ್ನ ಪ್ರಿಯ ಹವ್ಯಾಸ. ಇದಕ್ಕೆ ಪರಿಶ್ರಮ, ಸತತ ಪ್ರಯತ್ನ ನೋಡುವ ಕಣ್ಣು, ಅದನ್ನು ಗೆರೆಯಾಗಿಸುವ ಮನ ಬೇಕು. ತಾಳ್ಮೆ, ಸಮಯವೂ ಬೇಕು.

ನನ್ನದೇ ಪುಸ್ತಕವನ್ನೂ ಪ್ರಕಟಿಸುವ ಯೋಚನೆಯಲ್ಲಿದ್ದೇನೆ. ಅಂದರೆ ನೋಡಲು ತಾವೂ ಪ್ರಯತ್ನಿಸಲು ಅದರಲ್ಲೂ ವಿದ್ಯಾರ್ಥಿಗಳು, ಮಹಿಳೆಯರಿಗೆ ಸ್ಫೂರ್ತಿಯಾಗಬಲ್ಲದು. ಸದ್ಯ ಮಹಿಳಾ ಚಿತ್ರಕಾರ್ತಿಯರು ಬೆರಳೆಣಿಕೆಯಷ್ಟಿದ್ದು ಈ ಸಂಖ್ಯೆ ಹೆಚ್ಚುತ್ತ ಸಾಗಬೇಕೆಂಬಾಸೆ.

ಮಲ್ಲಿಗೆ ಪತ್ರಿಕೆಯೂ ವ್ಯಂಗ್ಯಚಿತ್ರಕಾರರನ್ನು ಪರಿಚಯಿಸಿತು. ಅದರಲ್ಲಿ ವ್ಯಂಗ್ಯಚಿತ್ರಗಳೊಡನೆ ನನ್ನ ಬಹುಮುಖ ವ್ಯಕ್ತಿತ್ವನ್ನೂ ಪರಿಚಯಿಸಿತು.

**ಇತರ ಹವ್ಯಾಸಗಳು**

ಅಂಚೆ ಚೀಟಿ, ನಾಣ್ಯ ಸಂಗ್ರಹಗಳು ಅಲ್ಲಲ್ಲಿ ಪ್ರದರ್ಶನವಾಗುತ್ತ ಮೆಚ್ಚುಗೆ ಗಳಿಸುತ್ತಿವೆ.

ಕರಕುಶಲ ವಸ್ತುಗಳ ತಯಾರಿಕೆ, ಚಿತ್ರಕಲೆ, ಕತೆಗಾರ್ತಿ, ಕವಯಿತ್ರಿ. ಸುಮಾರು ೩೦ ಕತೆಗಳು, ೧೫೦ರಷ್ಟು ಕವನಗಳನ್ನು ರಚಿಸಿರುವೆ. ಕತೆ, ಕವನ, ಚುಟುಕುಗಲೂ ಎಲ್ಲ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿವೆ. ಹಾಸ್ಯಲೇಖನಗಳೂ ಬೆಳಕು ಕಂಡಿವೆ.

**ಬಹುಮಾನಗಳು**

'ಶಾಲಾ ಗ್ರಂಥಾಲಯಗಳು' ಬರಹಕ್ಕೆ ಬಹುಮಾನ.

'ಸ್ವಚ್ಛತೆ ನಮಗೇಕೆ ಬೇಡ?' ವೈಚಾರಿಕ ಲೇಖನಕ್ಕೆ ಮೊಗವೀರ ಪತ್ರಿಕೆಯ ಸ್ಪರ್ಧೆಯ ಬಹುಮಾನ. ಹನಿಗವನಗಳು, ಕವನಗಳು ನವೀನ ಚಂದ್ರ ಪತ್ರಿಕೆಯಲ್ಲಿ ಬಹುಮಾನ ಗಳಿಸಿವೆ. ಸಿಂಗಾಪೂರ-ಮಲೇಶಿಯಾ ಪ್ರವಾಸ ಲೇಖನ ಅಭ್ಯುದಯ ಪತ್ರಿಕೆಯಲ್ಲಿ ಅತ್ಯುತ್ತಮ ಲೇಖನವೆಂದು ಬಹುಮಾನ ಪಡೆದಿದೆ.

ಅಕ್ಷಯ ಮಾಸಪತ್ರಿಕೆಯ ವ್ಯಂಗ್ಯಚಿತ್ರ ಸ್ಪರ್ಧೆಗೆ ತೃತೀಯ ಬಹುಮಾನ ದೊರೆತಿದೆ.

'ಮುಂಬೆಳಕು' ಮಾಸಪತ್ರಿಕೆ 'ಕಾನನದ ಮಲ್ಲಿಗೆ' ಎಂಬ 'ವಿಶೇಷ ಕಾಲಂ'ನಲ್ಲಿ ಪರಿಚಯಿಸಿದ್ದು, ಬಹುಮುಖ ವ್ಯಕ್ತಿತ್ವವೆಂದು ಓದುಗರಿಗೆ ಸವಿವರ ನೀಡಿದೆ.

**ಸದಸ್ಯತ್ವ**

೧. ಕರ್ನಾಟಕ ವ್ಯಂಗ್ಯ ಚಿತ್ರಕಾರರ ಸಂಘ ಬೆಂಗಳೂರು

೨. ಚಾಲುಕ್ಯ ಅಂಚೆ ಚೀಟಿ ಸಂಗ್ರಹಕಾರರ ಸಂಘ ಹುಬ್ಬಳ್ಳಿ ಆಜೀವ ಸದಸ್ಯಳು

**ಪ್ರಕಟಣೆಗಳು**

ಮಕ್ಕಳೇ ನೀವು ಮಾಡಿ ನೋಡಿ - ೨೦೦೩

ಕರ್ಮವೀರ ಪತ್ರಿಕೆಯಿಂದ ಕೆಲ ವ್ಯಂಗ್ಯಚಿತ್ರಗಳು, ಹಾಗೂ ಕರಕುಶಲ ವಸ್ತುಗಳ ತಯಾರಿಕೆಯ ಪುಸ್ತಕ

ಕಾವ್ಯ ತರಂಗಿಣಿ - ೨೦೧೦ (ಕವನ ಸಂಗ್ರಹ)

ಕಮಲದ ಹೂಗಳು - ಮಕ್ಕಳ ಪದ್ಯ ಸಂಗ್ರಹ - ೨೦೧೦

## ವ್ಯಂಗ್ಯ ಚಿತ್ರಗಳು

೧. ಈ ಚಿತ್ರದಲ್ಲಿ ಇವತ್ತಿನ ದಿನಗಳಲ್ಲಿ ಮೊಬೈಲ್‌ಗಳಲ್ಲದ ಜನರಿಲ್ಲ ಈ ಫೋನ್‌ಗಳು ಎಷ್ಟು ಸರಳವಾಗಿ ಎಲ್ಲಾರ ಕೈಗಲಿಗೂ ದೊರಕುತ್ತಿವೆ. ಎಂಬುದನ್ನು ಒಬ್ಬ ಭಿಕ್ಷುಕ ತನ್ನ ಭಿಕ್ಷೆಯನ್ನು ತನ್ನ ಮೊಬೈಲ್ ಮುಖಾಂತರ ಕೇಲುವುದನ್ನು ಈ ಚಿತ್ರದಲ್ಲಿ ಚಿತ್ರಿಸಲಾಗಿದೆ.

೨. ಈ ಚಿತ್ರದಲ್ಲಿ ನಾವು ಉಪಯೋಗಿಸುವ ಪದಾರ್ಥಗಳ ಬೆಲೆ ಗಗನ ಮುಟ್ಟಿವೆ. ಆದರೆ ಭಿಕ್ಷುಕರೆಂದರೆ ನಾವುಗಳು ಉಳಿದಂತಹ ಆಹಾರವನ್ನು ಕೊಡುತ್ತೇವೆ. ಆದರೆ ಇಲ್ಲಿ ಭಿಕ್ಷುಕನು ತಾಜಾ ಆಹಾರವನ್ನು ಬೇಡುತ್ತಿರುವುದನ್ನು ಹಾಸ್ಯ ಪ್ರಧಾನವಾಗಿ ಚಿತ್ರಿಸಲಾಗಿದೆ.

೩. ಈ ಚಿತ್ರದಲ್ಲಿ ಹಬ್ಬಗಳಿಗೆ ಹೆಣ್ಣುಮಕ್ಕಳು ತವರ ಮನೆಗಳಿಗೆ ಹೋಗುವುದು ಸಾಮಾನ್ಯವಾಗಿದೆ. ಆದರೆ ಇವತ್ತಿನ ದಿನಗಳಲ್ಲಿ ಖರ್ಚು ವೆಚ್ಚಗಳು ಜಾಸ್ತಿ ಅಂತಹ ಸಂದರ್ಭದಲ್ಲಿ ಮಕ್ಕಳುಗಳನ್ನೆಲ್ಲ ಕರೆದುಕೊಂಡು ದೀಪಾವಳಿ ಹಬ್ಬಕ್ಕೆ ಹೋದಾಗ, ಪಟಾಕಿಯ ಬದಲು ಈ ಮಕ್ಕಳ ಗಲಾಟೆಯೇ ಸಾಕಾಗುತ್ತದೆ ಎನ್ನುವುದನ್ನು ಇಲ್ಲಿ ಗುರುತಿಸಬಹುದಾಗಿದೆ.

೪. ಈ ಚಿತ್ರದಲ್ಲಿ ನಮಗೆ ಪರಿಚಯದವರು ಅಪರೂಪಕ್ಕೆ ಯಾವಾಗಲಾದರೂ ಸಿಕ್ಕರೆ ಸಾಕು ಮನೆಗೆ ಕರೆಯುವುದು ಒಂದು ವಾಡಿಕೆಯ ವಿಷಯವಾಗಿದೆ. ಆ ರೀತಿ ಕರೆದಂತಹ ಸಂದರ್ಭದಲ್ಲಿ ದೊಡ್ಡ ಕುಟುಂಬವನ್ನು ಹೊಂದಿದ್ದ ಒಟ್ಟು ಸಂಸಾರವೇ ಹೋದರೆ ಹೇಗಿರುತ್ತದೆ ಎಂಬುದನ್ನು ಇಲ್ಲಿ ಹಾಸ್ಯವಾಗಿ ಚಿತ್ರಿಸಲಾಗಿದೆ.

## ವಿ.ಜಿ. ನರೇಂದ್ರ

ಭಾರತೀಯ ವ್ಯಂಗ್ಯಚಿತ್ರಕಾರರ ಸಂಸ್ಥೆಯ ರೂವಾರಿಯಾದ ವ್ಯಂಗ್ಯ ಚಿತ್ರಕಲಾವಿದರಾದ ವಿ.ಜಿ. ನರೇಂದ್ರರವರು ಹುಟ್ಟಿದ್ದು, ಧಾರವಾಡ ೧೯೫೪ ಆಗಸ್ಟ್ ೧ ರಂದು ತಂದೆ ವೆಂಕಟೇಶ್ ಗುಂಡುರಾವ್ ತಾಯಿ ಪಾರ್ವತಿ ಬಾಯಿ ಈ ದಂಪತಿಗಳಿಗೆ ಐದು ಜನಮಕ್ಕಳು ಮೂರು ಜನ ಗಂಡುಮಕ್ಕಳು ಇಬ್ಬರು ಹೆಣ್ಣು ಮಕ್ಕಳು ಕಲಾವಿದ ವಿ.ಜಿ. ನರೇಂದ್ರರವರ ಕೊನೆಯವರು. ಇವರಿಗೆ ವ್ಯಂಗ್ಯಚಿತ್ರಗಳ ಬಗ್ಗೆ ಬಾಲ್ಯದಿಂದಲೂ ಹೊಂದಿಸಿಕೊಂಡವರು. ಇವರು ಪ್ರಾಥಮಿಕ ಶಿಕ್ಷಣ ಸರಾಸರಿ ಪ್ರಾಥಮಿಕ ಶಾಲೆಯಲ್ಲಿ ೪ನೇ ತರಗತಿಯವರೆಗೆ ನಂತರ ಸೆಂಟ್ರಲ್ ಸ್ಕೂಲ್‌ನಲ್ಲಿ ೫, ೬, ಮತ್ತು ೭ನೇ ತರಗತಿಗಳು. ಹೈಸ್ಕೂಲ್ ವಿದ್ಯಾರಣ್ಯದಲ್ಲಿ ಕಾಲೇಜು ಶಿಕ್ಷಣ ಪದವಿಯವರೆಗೆ ಜೆ.ಎಸ್.ಎಸ್ ಕಾಲೇಜಿನಲ್ಲಿ ನಡೆಯಿತು. ಇವರನ್ನು ಮೊದಲು ಆಕರ್ಷಿಸಿದ್ದು ಖ್ಯಾತ ವ್ಯಂಗ್ಯಚಿತ್ರಕಾರ ಶಂಕರ ಅವರ ವ್ಯಂಗ್ಯಚಿತ್ರಗಳು, ೧೯೭೫ರಲ್ಲಿ ಅವರು ಬರೆದ ಮೊದಲ ವ್ಯಂಗ್ಯಚಿತ್ರ (ರಾಜಕೀಯ) ಕರ್ಮವೀರ ವಾರಪತ್ರಿಕೆಯಲ್ಲಿ ಪ್ರಕಟವಾದಾಗ ಸ್ಫೂರ್ತಿಗೊಂಡ ನರೇಂದ್ರ ಎಲ್ಲ ನಿಯತಕಾಲಿಕೆಗಳಿಗೂ ವ್ಯಂಗ್ಯ ಚಿತ್ರಗಳನ್ನು ಬರೆದು ಕಳಿಸಲು ಪ್ರಾರಂಭಿಸಿದರು. ಇವರು ಕರ್ನಾಟಕ ವಿಶ್ವವಿದ್ಯಾಲಯದಿಂದ ವಿಜ್ಞಾನದ ಪದವಿಗಳಿಸಿದ ನಂತರ ತಮ್ಮ ವೃತ್ತಿಯನ್ನು ರೂಪಿಸಿಕೊಳ್ಳಲು ಮುಂಬೈಗೆ

ಪ್ರಮಾಣಿಸಿದರು. ಅಲ್ಲಿ ವ್ಯಂಗ್ಯ ಚಿತ್ರಗಳು ಇಲ್ಲಿ ಸ್ಟ್ರೇಡೆಡ್ ವೀಕ್ಲಿ ಆಫ್ ಇಂಡಿಯಾ, ಧರ್ಮಯುಗ ಮತ್ತಿತರ ಪತ್ರಿಕೆಗಳಲ್ಲಿ ಪ್ರಕಟವಾಗತೊಡಗಿದವು. ಕೆಲ ಕಾಲದ ನಂತರ ಭಾರತದ ಪ್ರಥಮ ಕಾಮಿಕ್ ಫೀಚರ್ ಸಿಂಡಿಕೇಟ್ ರಾಗ 'ರೇಖಾ ಟೀಚರ್ಸ್' ಸೇರಿದರು. ಅವರು ರಚಿಸಿದ ಪಾಕೆಟ್ ಕಾರ್ಟೂನ್ 'ರಿಪೋರ್ಟರ್ ಸಂಜು' ಉದಯವಾಣಿ ಸೇರಿ ಭಾರತದ ಬೇರೆ ಬೇರೆ ಭಾಷೆಗಳ ೧೫ ದಿನ ಪತ್ರಿಕೆಗಳಲ್ಲಿ ಪರಿಚಯವಾಗಲು ಪ್ರಾರಂಭವಾದವು.

ಮುಂದೆ 'ಫ್ರೀ ಪ್ರೆಸ್‌ಜರ್ನಲ್' ಪತ್ರಿಕೆಯಲ್ಲಿ ರಾಜಕೀಯ ವ್ಯಂಗ್ಯ ಚಿತ್ರ ಬರೆಯಲು ಅವಕಾಶ ಸಿಕ್ಕಿತು. ಅಲ್ಲಿ ಪ್ರಕಟವಾದ ಅವರ ವ್ಯಂಗ್ಯಚಿತ್ರಗಳು ಭಾರತದ ವ್ಯಂಗ್ಯಚಿತ್ರ ಪಿತಾಮಹರಾದ ಶಂಕರವರ ಗಮನಸೆಳೆದವು. ಕೂಡಲೇ ಇವರಿಗೆ ಕರೆಬಂತು. ದಿಲ್ಲಿಯಲ್ಲಿ ಶಂಕರವರನ್ನು ಬೇಟಿಯಾಗಲು, ಪ್ರಾಯೋಗಿಕವಾಗ ಒಂದು ವಾರ ಕಾಲದಿಲ್ಲಿಯಲ್ಲಿ ಶಂಕರ್‌ರವರ ಜೊತೆಯಲ್ಲಿ ಕೆಲಸ ಮಾಡಿದ ನರೇಂದ್ರರ ವ್ಯಂಗ್ಯಚಿತ್ರಗಳನ್ನು ಮೆಚ್ಚಿಕೊಂಡ ಶಂಕರ್ ಅವರನ್ನು 'ಶಂಕರ್ಸ್ ವೀಕ್ಲಿ' ಸೇರಲು ಆಹ್ವಾನಿಸಿದರು. ೧೯೭೩ರಲ್ಲಿ 'ಶಂಕರ್ಸ್ ವೀಕ್ಲಿ' ಸೇರಿದರು. ಎರಡು ವರ್ಷದ ನಂತರ ೧೯೭೫ರಲ್ಲಿ ದೇಶಕ್ಕೆ ಎದುರಾದ ಅಪತ್ಕಾಲೀಕ ಸ್ಥಿತಿಯಿಂದಾಗಿ ಸಂಕರ್ಸ್ ವೀಕ್ಲಿ ಪ್ರಕಟಣೆಯನ್ನು ನಿಲ್ಲಿಸಬೇಕಾಯಿತು. ಈ ಸಂದರ್ಭದಲ್ಲಿ ನರೇಂದ್ರರವರು ಬೆಂಗಳೂರಿಗೆ ಬಂದು ಸಂಯುಕ್ತ ಕರ್ನಾಟಕದಲ್ಲಿ ಸ್ಟಾಪ್ ವ್ಯಂಗ್ಯ ಚಿತ್ರಕಾರರಾದರು. ೧೯೭೭ರಲ್ಲಿ ೧೧ ವರ್ಷಗಳ ನಂತರ ಕನ್ನಡ ಪ್ರಭ ಸೇರಿದರು. ೧೯೮೭ರ ವರೆಗೆ, ೩೦ ವರ್ಷಗಳ ದೀರ್ಘ ಸೇವೆಯ ನಂತರ ೨೦೦೭ರಲ್ಲಿ ಕನ್ನಡ ಪ್ರಭದಿಂದ ನಿವೃತ್ತಿ ಹೊಂದಿದರು. ಇವರ ವ್ಯಂಗ್ಯಚಿತ್ರಗಳು ವಿದೇಶದ ಅನೇಕ ನಿಯತಕಾಲಿಕೆಗಳಲ್ಲೂ ಪ್ರಕಟವಾಗಿವೆ.

೧೯೭೭ರಲ್ಲಿ ಕರ್ನಾಟಕ ವ್ಯಂಗ್ಯಚಿತ್ರಕಾರರ ಸಂಘ ಸ್ಥಾಪನೆಯಾದಾಗ ಕಾರ್ಯಕಾರಿ ಸಮಿತಿಯ ಸ್ಥಾನ ಪಡೆದ ಕಲಾವಿದರಾದ ನರೇಂದ್ರನವರು ೧೯೭೮ರಲ್ಲಿ ಅಧ್ಯಕ್ಷರೂ ಆದರು. ೧೯೭೯ರಲ್ಲಿ ೨ನೇ ವ್ಯಂಗ್ಯಚಿತ್ರ ಸಮ್ಮೇಳನದಲ್ಲಿ ಭಾರತದ ಪ್ರಸಿದ್ಧ ವ್ಯಂಗ್ಯಚಿತ್ರಕಾರರಾದ ಆರ್.ಕೆ. ಲಕ್ಷ್ಮಣ್ ಮಾರಿಯೋಡಿ ಮಿರಾಂಡಾ ಮತ್ತು ಅಬು ಅಬ್ರಹಾಂ ಭಾಗವಹಿಸಿದ್ದು, ಒಂದು ವಿಶೇಷ. ಇವರು ರಾಜ್ಯಾದ್ಯಂತ ಅನೇಕ ಕಡೆಗಳಲ್ಲಿ ವ್ಯಂಗ್ಯಚಿತ್ರ ಪ್ರದರ್ಶನಗಳನ್ನು ನಡೆಸಿದ್ದಾರೆ. ಹಿರಿಯ ವ್ಯಂಗ್ಯಚಿತ್ರಕಾರರ ನೆರವಿನಿಂದ ಇವರು ಉದಯೋನ್ಮುಖ ವ್ಯಂಗ್ಯಚಿತ್ರಕಾರರಿಗಾಗಿ ಅನೇಕ ಕಾರ್ಯಾಗಾರಗಳನ್ನು ಏರ್ಪಡಿಸಿದ್ದಾರೆ. ಅಲ್ಲದೆ ವ್ಯಂಗ್ಯಚಿತ್ರಕಾರರ ಸಂಘಟನೆಗೆ ಕ್ರಿಯಾತ್ಮಕ ಸೇವೆ ಸಲ್ಲಿಸಿದ್ದಾರೆ. ೨೦ ರಿಂದ ಇದು ಭಾರಿತೀಯ ವ್ಯಂಗ್ಯಚಿತ್ರಕಾರರ ಸಂಸ್ಥೆಯ ವ್ಯವಸ್ಥಾಪಕ ಟ್ರಸ್ಟಿಯಾಗಿ ಸದ್ಯದಲ್ಲಿ ಸೇವೆಸಲ್ಲಿಸುತ್ತಿದ್ದಾರೆ. ಇವರಿಗೆ ಇಬ್ಬರು ಹೆಣ್ಣುಗಳಿದ್ದಾರೆ. ಇವರ ಕುಟುಂಬವು ಬೆಂಗಳೂರಿನಲ್ಲಿ ವಾಸವಾಗಿದ್ದಾರೆ.

ಪ್ರಶಸ್ತಿ ಮತ್ತು ಸನ್ಮಾನಗಳು

* ಕರ್ನಾಟಕ ವ್ಯಂಗ್ಯಚಿತ್ರ ಸಂಘದಿಂದ
* ಹೂಗಾರ ಸ್ಮರಣಾ ಪ್ರತಿಷ್ಠಾಪನದಿಂದ
* ಬೆಂಗಳೂರು ಮಾಧ್ಯಮ ಅಕಾಡೆಮಿಯಿಂದ

* ಕರ್ನಾಟಕ ಪತ್ರಕರ್ತರ ಸಂಘದಿಂದ

* ಕನ್ನಡ ಸಾಹಿತ್ಯ ಪರಿಷತ್ತಿನಿಂದ ಇನ್ನೂ ಕೆಲವು ಕಡೆ ಪ್ರಶಸ್ತಿ ನೀಡಿ ಸನ್ಮಾನಿಸಲಾಗಿದೆ.

ಹವ್ಯಾಸ : ಪುಸ್ತಕಗಳನ್ನು ಓದುವುದು. ಸಮಾಜಸೇವೆ ಮಾಡುವುದಾಗಿದೆ.

ವ್ಯಂಗ್ಯ ಚಿತ್ರಗಳು

೧. ಈ ಚಿತ್ರದಲ್ಲಿ ರಾಜಕೀಯ ರಂಗದಲ್ಲಿ ಕುರ್ಚಿಗಾಗಿ ಕಿತ್ತಾಡುತ್ತಿರುವುದು ಸಾಮಾನ್ಯವಾದ ವಿಷಯವಾಗಿದೆ. ಕೆಲವರು ತಮ್ಮ ಆಳ್ವಿಕೆಯ ಅವಧಿ ಮುಗಿದರು ತಮ್ಮ ಕುರ್ಚಿಗಳನ್ನು ಬಿಡುವುದಿಲ್ಲವೆಂಬುದನ್ನು ಇಲ್ಲಿ ತೋರಿಸಿರುವುದು ಗಮನಿಸಬಹುದು.

೨. ಈ ಚಿತ್ರದಲ್ಲಿ ಟಿ.ವಿ. ವೀಕ್ಷಿಸುತ್ತಿರುವಾಗ ಟಿ.ವಿಯಲ್ಲಿ ಭೂಕಂಪದ ದೃಶ್ಯಬಂದಾಗ ಮನೆಯಲ್ಲಿರುವ ಸಾಮಾನಗಳಿಗೆ ಇದರ ಎಫೆಕ್ಷನ್ ಹಾಸ್ಯವಾಗಿ ಇಲ್ಲಿ ಚಿತ್ರಿಸಿರುವುದನ್ನು ನಾವು ನೋಡಬಹುದಾಗಿದೆ.

೩. ಈ ಚಿತ್ರದಲ್ಲಿ ಸಿನಿಮಾದಲ್ಲಿ ನಿರ್ದೇಶಕರ ಪರಿಸ್ಥಿತಿಯ ಇವತ್ತಿನ ಸನ್ನಿವೇಶವನ್ನು ನೋಡಬಹುದಾಗಿದೆ.

೪. ಈ ಚಿತ್ರದಲ್ಲಿ ರಾಜಕೀಯ ವ್ಯಕ್ತಿಯ ಕ್ಯಾರಿಕೇಚರನ್ನು ಚಿತ್ರಿಸಲಾಗಿದೆ.

ಬಿ.ವಿ. ಪಾಂಡುರಂಗರಾವ್

ವ್ಯಂಗ್ಯಚಿತ್ರ ಕಲಾವಿದರಾದ ಬಿ.ವಿ. ಪಾಂಡುರಂಗರಾವ್ ಹುಟ್ಟಿದ್ದು ಮೈಸೂರಿನಲ್ಲಿ ೧೯೪೪ರಲ್ಲಿ ಮೆಕಾನಿಕಲ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲೊಮಾವನ್ನು ಪಡೆದು ಸ್ಟೀಲ್ ಪ್ಲಾಟ್‌ನಲ್ಲಿ ಕೆಲಸಕ್ಕೆ ಸೇರಿದರು. ಆದರೆ ಇವರಿಗೆ ವ್ಯಂಗ್ಯಚಿತ್ರಗಳನ್ನು ರಚಿಸುವಲ್ಲಿ ಆಸಕ್ತಿ ಹೊಂದಿದ್ದರಿಂದ ವ್ಯಂಗ್ಯಚಿತ್ರಗಳನ್ನು ರಚಿಸುವಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇವರು ಕನ್ನಡ, ಇಂಗ್ಲೀಷ್ ಮತ್ತು ಹಿಂದಿ ಪತ್ರಿಕೆಗಳಿಗೆ ಸಾಕಷ್ಟು ವ್ಯಂಗ್ಯಚಿತ್ರಗಳನ್ನು ರಚಿಸಿಕೊಟ್ಟಿದ್ದಾರೆ. ವ್ಯಂಗ್ಯಚಿತ್ರಕಲೆಯಲ್ಲಿಯು ಸಹ ಡಿಪ್ಲೊಮಾವನ್ನು ದೆಹಲಿಯಲ್ಲಿ ಮುಗಿಸಿದ್ದಾರೆ. ಇವರು ಸಾಮಾಜಿಕ, ರಾಜಕೀಯ ಕ್ರೀಡೆಗೆ, ಪರಿಸರವನ್ನು ಸಂಬಂಧಪಟ್ಟಂತ ಅನೇಕ ರೀತಿಯ ವ್ಯಂಗ್ಯಚಿತ್ರಗಳನ್ನು ರಚಿಸಿದ್ದಾರೆ. ಆ್ಯನಿಮೇಶನ್ ಕ್ಷೇತ್ರದಲ್ಲೂ ಸಹ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಬಿ.ವಿ. ಪಾಂಡುರಂಗರಾವ್‌ರವರು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ವ್ಯಂಗ್ಯಚಿತ್ರಗಳ ರಚನೆಯಲ್ಲಿ ಭಾಗವಹಿಸಿದ್ದಾರೆ. ಅಲ್ಲದೆ ರಾಜ್ಯಮಟ್ಟ, ರಾಷ್ಟ್ರಮಟ್ಟ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಇವರ ವ್ಯಂಗ್ಯಚಿತ್ರಗಳು ಪ್ರದರ್ಶನಕ್ಕೆ ಕೆಲವು ಪ್ರಶಸ್ತಿಗಳನ್ನು ತೆಗೆದುಕೊಂಡಿದ್ದಾರೆ. ಹೊರ ರಾಜ್ಯಗಳಿಗೂ ಸಹ ಅನೇಕ ಕಾರ್ಟೂನ್ ಕ್ಯಾಟ್‌ಲಾಗ್‌ಗಳನ್ನು ಕಳಿಸಿದ್ದಾರೆ. ಅನೇಕ ಬಾರಿ ಏಕವ್ಯಕ್ತಿ ವ್ಯಂಗ್ಯಚಿತ್ರಕಲಾ ಪ್ರದರ್ಶನವನ್ನು ನೀಡಿದ್ದಾರೆ. ಈ ಕ್ಷೇತ್ರದಲ್ಲಿ ಮಾಡುದ ಸೇವೆಗಾಗಿ Limca Recordನ್ನು 2011ರಲ್ಲಿ Indian Book Record - 2010ರಲ್ಲಿ world Recordನ್ನು 2011ರಲ್ಲಿ ಮೂರು ಬಾರಿ ಗಳಿಸಿದ್ದಾರೆ.

ಬಿ.ವಿ. ಪಾಂಡುರಂಗರಾವ್‌ರವರು ಕರ್ನಾಟಕ ವ್ಯಂಗ್ಯಚಿತ್ರಕಲೆ ತಮ್ಮನ್ನು ಮೀಸಲಾಗಿಟ್ಟುಕೊಂಡ ವ್ಯಂಗ್ಯಚಿತ್ರಕಲೆಯನ್ನು ಉನ್ನತ ಮಟ್ಟಕ್ಕೆ ತೆಗೆದುಕೊಂಡು ಹೋಗಿದ್ದಾರೆ.

೧. ನಮ್ಮ ರಾಜಕೀಯ ಹಾಗೂ ರಾಜಕೀಯ ವ್ಯಕ್ತಿಗಳ ಬಗ್ಗೆ ತೋರಿಸಲಾಗಿದೆ. ಚೆನ್ನಾಗಿ ತಿಂದು ಮೈಯನ್ನು ಬೆಳೆಸಿಕೊಂಡಿರುತ್ತಾರೆ ಎಂಬುದನ್ನು ಈ ಚಿತ್ರದಲ್ಲಿದೆ.

೨. ಈ ಚಿತ್ರದಲ್ಲಿ ಇವತ್ತಿನ ದಿನಗಳಲ್ಲಿ ಕಾಡುಗಳು ಮಾಯವಾಗುತ್ತಿವೆ. ವನ್ಯಜೀವಿಗಳು, ಪಕ್ಷಿ ಬದುಕಲು ಕಷ್ಟವಾಗುತ್ತಿವೆ. ಅಲ್ಲದೆ ಇವುಗಳ ಸಂಖ್ಯೆಯು ಕಡಿಮೆಯಾಗುತ್ತಿದೆ. ಬದುಕಲು ನೆಲೆಯನ್ನು ಹುಡುಕುತ್ತಾ ಹೋಗುತ್ತಿರುವುದನ್ನು ಚಿತ್ರಿಸಿದ್ದಾರೆ.

೩. ಈ ಚಿತ್ರದಲ್ಲಿ ಮನಮೋಹನ್ ಸಿಂಗ್‌ರವರನ್ನು ಕ್ಯಾರಿಕೇಚರ್ ಮಾಡಲಾಗಿದೆ.

೪. ಈ ಚಿತ್ರದಲ್ಲಿ ಲಾಲೂಪ್ರಸಾದ್ ಯಾದವ್‌ರವರ ಕ್ಯಾರಿಕೇಚರ್ ನೋಡಬಹುದಾಗಿದೆ.

## ಶ್ರೀಮತಿ ಡಿ. ಭೂಪತಿ

ಶ್ರಿಮತಿ ಡಿ. ಭೂಪತಿಯವರು ಹುಟ್ಟಿದ್ದು ಚಿತ್ತೂರಿನಲ್ಲಿ ಇವರ ತಂದೆ ಡಿ. ಆಂಜನೇಯಲು ತಾಯಿ ಧನಕೋಟಮ್ಮ ದಂಪತಿಯ ಮೂರನೇ ಸುಪುತ್ರಿಯಾಗಿ ೧೯೪೪ರಲ್ಲಿ ಜನಿಸಿದರು. ಚಿಕ್ಕ ವಯಸ್ಸಿನಿಂದಲೂ ಇವರಿಗೆ ಕಾರ್ಟೂನ್ ರಚಿಸುವುದರಲ್ಲಿ ಆಸಕ್ತಿ ಹೊಂದಿದ್ದರು. ಆದರೆ ಶ್ರೀಮತಿ ಭೂಪತಿಯವರು ಕಾನೂನು ಕ್ಷೇತ್ರದಲ್ಲಿ ಪೋಸ್ಟ್ ಗ್ರ್ಯಾಜುಯೆಟ್ ಪದವಿ ಪಡೆದು ಸ್ವಲ್ಪ ಕಾಲ ನ್ಯಾಯವಾದಿಗಳಾಗಿ ಕರ್ನಾಟಕ ಉಚ್ಚನ್ಯಾಯಾಲದಲ್ಲಿ ಗೌರ್ನಮೆಂಟ್ ಪ್ಲೀಡರ್ ಆಗಿ ಸೇವೆ ಸಲ್ಲಿಸಿದ್ದಾರೆ. ಇವರ ಪತಿಯವರು ಪ್ರೊ. ಎಂ.ಎಸ್ ನಾಯ್ಡು ಅವರು ಅನಾರೋಗ್ಯದ ಕಾರಣದಿಂದ ಇವರು ವಕೀಲಿ ವೃತ್ತಿಯನ್ನು ತ್ಯಜಿಸಿದರು. ನಂತರ ದಿನಗಳಲ್ಲಿ ಆರ್.ಎಂ. ಹಡಪದ್‌ರವರ ಕೆನ್ ಸ್ಕೂಲ್ ಆಫ್ ಆರ್ಟ್‌ನಲ್ಲಿ ಸಂಜೆಯ ಮಳೆ ಚಿತ್ರ ರಚನೆಯನ್ನು ಅಭ್ಯಾಸಮಾಡಿದರು. ಕಾನೂನು ತಜ್ಞರಾದ ಇವರು ಕಾನೂನಿನ ಬಗ್ಗೆ ಜನಸಾಮಾನ್ಯರಿಗೆ ತಿಳಿಸುವ ಹಂಬಲವುಳ್ಳವರಾಗಿದ್ದರು. ಕಾರ್ಟೂನ್‌ಗಳ ಮೂಲಕ ಜನರಿಗೆ ಕಾನೂನು ತಿಳುವಳಿಕೆ ಒದಗಿಸಲು ಎರಡು ಪುಸ್ತಕಗಳನ್ನು ರಚಿಸಿದರು. 'ಸ್ವತಂತ್ರ ಭಾರತ ವ್ಯಂಗ್ಯ ಚಿತ್ರಗಳಲ್ಲಿ' (೨೦೦೫) ಮತ್ತು 'ಲಾ ಕಾರ್ಟೂನ್ಸ್' (೨೦೦೭)ರಲ್ಲಿ ಈ ಪುಸ್ತಕಗಳಿಗೆ ಆರ್.ಎಂ. ಹಡಪದ್ ಅವರು ಮುನ್ನುಡಿಯನ್ನು ಬರೆದಿದ್ದಾರೆ.

## ವ್ಯಂಗ್ಯ ಚಿತ್ರಗಳು

೧. ನಾವು ಎಷ್ಟೇ ಓದಿ ಜ್ಞಾನವನ್ನು ಸಂಪಾದಿಸಿಕೊಂಡರು ನಮ್ಮ ಮೂಡ ನಂಬಿಕೆಗಳನ್ನು ಮಾತ್ರ ಬಿಡುವುದಿಲ್ಲ. ವಿಜ್ಞಾನಿಯಾದವನು ಎಷ್ಟೇಲ್ಲಾ ಹೊಸ ಹೊಸ ರೀತಿಯಲ್ಲಿ ವಿಷಯಗಳನ್ನು ಆವಿಷ್ಕಾರಮಾಡುತ್ತಾನೆ. ಆದರೂ ಅವನು ಸಹ ಕೆಲವು ಹಿಂದಿನಿಂದ ಬಂದಂತಹ ಪೂರ್ವಜನ್ಮ ಆಧಾರವನ್ನು ಮಾತ್ರ ಬಿಡುವುದಿಲ್ಲ ಎನ್ನುವುದು ಈ ಚಿತ್ರದಲ್ಲಿದೆ.

೨. ನಮ್ಮ ಸಂವಿಧಾನದಲ್ಲಿ ಸ್ತ್ರೀಯರಿಗೆ ಎಷ್ಟೇಲ್ಲಾ ರೀತಿಯ ಅನೇಕ ಸವಲತ್ತುಗಳನ್ನು ನೀಡಿದರು ಸಹ ಮಹಿಳೆಯನ್ನು ಸ್ವಾತಂತ್ರವಾಗಿ ಬದುಕಲು ಬಿಡದೆ ಅವರನ್ನು ಕಟ್ಟಿಹಾಕಿರುವುದು ಈ ಚಿತ್ರದಲ್ಲಿದೆ.

